ಕವಿ ಗುರುಲಿಂಗವಿಭು

ವಿರಚಿತ

# ಭಿಕ್ಷಾಟನ ಚರಿತೆ.

## ಪ್ರಾಚೀನ ಟೀಕಾಸಮೇತ

ಮ. ಅ. ರಾಮಾನುಜಯ್ಯಂಗಾರ್ಯರಿಂದ

ಪರಿಶೋಧಿಸಲ್ಪಟ್ಟು

ಕವಿಚರಿತೆ ವಿಷಯಸೂಚಿಗಳೊಡನೆ.

ಮೈಸೂರು

ಜಿ. ಟಿ. ಎ. ಮುದ್ರಾಶಾಲೆಯಲ್ಲಿ ಮುದ್ರಿತವಾಯಿತು.

1903.

# ಪೀಠಿಕೆ.

ಂಥಕರ್ತನು ವೀರಶೈವ ಮತದವನು; ಈತನು ತನ್ನ ಗ್ರಂಥದ ಕೊನೆಲ್ಲಿ "ಜಯುಜಯು! ಶಿವಜ್ಞಾನಿ ಬಸವೇಶ ಮಮಹೃದಯಾಬ್ಜಸನ್ನಿವಾಸ" ೊದಲ ಸಂಧಿಯ ೨ ನೆಯ ಪದ್ಯದಲ್ಲಿ "ಮದ್ಗುರು ಶಿವಜ್ಞಾನಿ ಬಸವೇಂದೂ, ಆದೇ ಸಂಧಿಯ ಮೂರನೆಯ ಪದ್ಯದಲ್ಲಿ "ಪರಮಗುರು ಬಸವೇ ಎಂದೂ, ವೀರಶೈವಮತ ಪ್ರವರ್ತಕನಾದ ಬಸವನನ್ನು ಸ್ತುತಿಸಿರುವುದರಿಂದಲೂ, ಮತ್ತು ಮೊದಲ ಸಂಧಿಯ ೩ ನೆಯ ಪದ್ಯದಲ್ಲಿ "ಚೆನ್ನಬಸವನಂ ಸರಸಾಲ್ಲಮಾಚಾರ್ಯನಂ ರೇವಣಾರ್ಯನಂ। ಶರಣ ಮಡಿವಳ ಮಾಚಿದೇವನಂ ಸಿದ್ಧರಾಮನ ಮಾದಿರಾಜಯ್ಯನಂ॥ ಧರೆಯೊಳಿವರೊಳಗಾದಸಂಖ್ಯಾತರುಗಳ ಚರಣಮಂ ನೆನೆದು" ಎಂದು ಹೇಳಿರುವುದರಿಂದಲೂ, ಮತ್ತು ಈ ಗ್ರಂಥದ ಟೀಕಾಕಾರನು "ಗುರುಲಿಂಗವಿಭು" ಎಂಬುದಕ್ಕೆ ಗುರುಲಿಂಗದೇವರು ಎಂದರ್ಥ ಬರೆದಿರುವುದರಿಂದಲೂ, ಕವಿಯು ಲಿಂಗಾಯುತ ಮತಕ್ಕೆ ಸೇರಿದವನೆಂದು ತಿಳಿಯುತ್ತದೆ. ಈತನ ವಿಷಯವಾಗಿ ಈ ಗ್ರಂಥದಿಂದ ಮತ್ತೇನೂ ತಿಳಿಯುವುದಿಲ್ಲ. ಈತನು ತನ್ನ ಮುಖ್ಯ ಗುರುವನ್ನು ಕೂಡ ಹೇಳಿಕೊಂಡಿಲ್ಲ. ಈತನು ಇನ್ನು ಯಾವ ಗ್ರಂಥಗಳನ್ನು ರಚಿಸಿದ್ದಾನೆಯೋ ತಿಳಿಯದು. ಈ ಗ್ರಂಥದ ಪ್ರೌಢಿಮೆಯನ್ನು ನೋಡಿದರೆ ಈತನು ಅನೇಕ ಗ್ರಂಥಗಳಿಗೆ ಕರ್ತನಾಗಿರಬಹುದೆಂದು ತೋರುತ್ತದೆ. ಕಬ್ಬಿಗರ ಕೈಪಿಡಿಯನ್ನು ಬರೆದ ಕವಿಯೇ ಈತನೆಂದು ಕೆಲವರು ಅನುಮಾನಿಸುತ್ತಾರೆ. ಅಂಥ ಅನುಮಾನಕ್ಕೆ ಯಾವ ಕಾರಣವೂ ಇಲ್ಲ. ಆ ಗ್ರಂಥಕರ್ತನು ಬ್ರಾಹ್ಮಣನು. ಈತನು ಬ್ರಾಹ್ಮಣನಲ್ಲ. ಈತನು ೧೬ ನೆಯ ಶತಮಾನದವನೆಂದು ಕರ್ಣಾಟಕ ಕವಿಚರಿತ್ರೆಯಲ್ಲಿ ಹೇಳಿ ಇದೆ.

ಗ್ರಂಥವಿಚಾರ :—

ಈ ಗ್ರಂಥವು ಸಂಸ್ಕೃತದಲ್ಲಿ "ಭಿಕ್ಷಾಟನಕಾವ್ಯ" ವೆಂದು ಪ್ರಸಿದ್ಧವಾದ ಕಾವ್ಯದ ಆಧಾರದಮೇಲೆ ಹುಟ್ಟಿರಬಹುದೆಂದು ತೋರುತ್ತದೆ. ಆ ಗ್ರಂಥದ ಸಂಪೂರ್ಣವಾದ ಪರಿವರ್ತನವಲ್ಲ; ಕೆಲಕೆಲವು ಶ್ಲೋಕಗಳನ್ನು ಮಾತ್ರ ಆರಿಸಿಕೊಂಡು ಬರೆದಂತಿದೆ. ಇದು ವಾರ್ಧಿಕ ಷಟ್ಪದಿಯಲ್ಲಿ ಬರೆದಿದೆ. ಇದರಲ್ಲಿ ೩ ಸಂಧಿಗಳಿವೆ; ಪದ್ಯಗಳು—೧ನೆಯ ಸಂಧಿಯಲ್ಲಿ ೨೩, ೨ ನೆಯದರಲ್ಲಿ ೫೨, ೩ ನೆಯದರಲ್ಲಿ ೬೦, ಈಗಿನ ಕಾಲಕ್ಕೆ ಮುದ್ರಣಕ್ಕೆ ಯೋಗ್ಯವಲ್ಲವೆಂದು ತೆಗೆಯಲ್ಪಟ್ಟವು ೧೧, ಒಟ್ಟು ೧೫೦ ಪದ್ಯಗಳಿವೆ.

........ಪದಿನೆಂಟು ವರ್ಣನೆಗಳಿಂ ॥
ಪಿರಿದಾದ ಕಬ್ಬಂಗಳಿರಲು ಭಿಕ್ಷಾಟನದ ।
ಚರಿತೆಯೋನೆನ್ನದಿರಿ ನರಸ್ತುತಿಯಲ್ಲ ।
ಚರಿತೆಗಳೊಳಿಂತಿದಕೆ ಚರಿತೆಯೆಂದೆನೆ ಪೇಳ್ವೆನವಧರಿಸಿ ಸರ್ವಜ್ಞಾ

ಎಂದೂ,

ಸಿರಿ ಹೋದ ಬಳಿಕಾವನಾದಡಾಗಲಿಯುವನು ।
ದರರಕ್ಷಣಾರ್ಥ ಭಿಕ್ಷಾಚರಿತ್ರಂ ಕೆಟ್ಟ ।
ಪರಿಗೆಲ್ಲ ಕಟ್ಟಕಡೆಯಲಿ ಕೆಡದ ತಿರವಾದ ಒದುಕು ಭಿಕ್ಷಾಚರಿತ
ದರುಸನಂಗಳಿಗೆಲ್ಲ ಭಿಕ್ಷಾಟನಚರಿತ್ರ ।
ಗುರುಮತಪದಾಗಿರಲುಳಿದ ಚರಿತ್ರೆಗಳಿದಕೆ ।
ಸರಿಯಲ್ಲವಾಗಿ ಪೇಳಿದೆ ಕೇಳತಕ್ಕುದೀಹರನ ಭಿಕ್ಷಾಚರಿತ್ರಂ ॥

ಎಂದೂ ಹೇಳಿಕೊಳ್ಳುತ್ತಾನೆ. ಮತ್ತು

ಹೆಸರು ಹಾಲಯ್ಯನೆಱೆದುಣ್ಬುದಂಬಿಲವೆಂದು ।
ಪ್ರಸಿರುವರಗಾಧೆಯುಂತಲ್ಲವೆನ್ನೀಕೃತಿಯು ।
ಪೆಸರು ಭಿಕ್ಷಾಟನದಚರಿತವಿದು ತಪ್ಪದೆನೆ ಪರಿಪರಿಯುರುಚಿಯುಸುಳ್ಳ
ರಸಮಯಪದಾರ್ಥಗಳ ಮನೆಮನೆಯ ನಾರಿಯರ ।
ಪೊಸಬಗೆಯ ಶೃಂಗಾರಭಾವಗಳಲಂಕಾರ ।
ವಿಸರವಿಂತಿದಱೊಳೀಕ್ಷಿಸುವರುಂಟಾಗೆ ರಂಜಿಸುವುದೀಭೂತಳದೊಳು ॥

ಎಂಬ ಪದ್ಯದಲ್ಲಿ ಕವಿಯು ತಾನೇ ಹೇಳುವಂತೆ ಈ ಗ್ರಂಥವು ಒಂದು "ಮೋಹಕೃತಿ" ಎಂಬದಾಗಿ ನಿಸ್ಸಂದೇಹವಾಗಿ ಹೇಳಬಹುದು. ಈ ಕೃತಿಗೆ—

ಸ್ಥಿರಶಾಸನವಿದೆನಿಸಿ ಮೆಱೆವ ಭಿಕ್ಷಾಟನದ ।
ಚರಿತೆಗಧಿಪತಿಯಾದ ಪರಮೇಶ್ವರಂ ಜಗ ।
ದ್ಭರಿತನಾಗಿಹನೆಂತದೆನಲು ಗೋಪಾಂಗನೆಯರುಗಳ ಮನೆಮನೆದಪ್ಪದೆ ॥
ವರಕೃಷ್ಣನಿಹನದೆಂತೆನಲು—

ಎಂಬ ಪದ್ಯಭಾಗದಿಂದ ಈಶ್ವರನ ಸರ್ವವ್ಯಾಪಕತ್ವನಿರೂಪಣವೇ ಕವಿಗೆ ಮುಖ್ಯಾಭಿಪ್ರಾಯವೆಂದೂ,

......... .....ಗುರುಲಿಂಗವಿಭು ।
ಹರುಷದಿಂ ರಚಿಸಿದೀಮೋಹಕೃತಿ ರಸಿಕರಾ ।
ಭರಣ ಭಾವುಕರ ಕೋವಿದರ ಮನವನೊಳಕೊಂಡತಿ ಸೊಬಗ ಬೀಱುತಿಹುದು॥

ಎಂಬುದರಿಂದ ರಸಿಕರ ಭಾವುಕರ ಕೋವಿದರ ಮನೋರಾಸಿಕ್ಯವು ಅಂತರಾಳಿಕಪ್ರಯೋಜನವೆಂದೂ ತೋರುತ್ತದೆ.

ಈ ಗ್ರಂಥದ ಕಥಾಸಾರವು ೧ನೆಯ ಸಂಧಿ ೬—೧೦, ೨೨ ನೆಯ ಪದ್ಯಗಳು; ೨ ನೆಯ ಸಂಧಿ ಸೂಚನೆ, ೬೨ ನೆಯ ಪದ್ಯ; ೩ ನೆಯ ಸಂಧಿ ಸೂಚನೆ, ೧೮, ೩೬, ೪೦, ೪೬, ೫೮ ನೆಯ ಪದ್ಯಗಳ ಟೀಕುಗಳನ್ನು ನೋಡಿದರೆ ಸ್ಪಷ್ಟವಾಗುತ್ತದೆ.

ಈ ಗ್ರಂಥದ ಶೈಲಿಯು ಸರಸವಾಗಿಯೂ, ಮೃದುವಾಗಿಯೂ, ಪ್ರೌಢವಾಗಿಯೂ, ಭಾವಗರ್ಭಿತವಾಗಿಯೂ ಇದೆ. ಇದೊಂದು ಶೃಂಗಾರಕಾವ್ಯ.

ಟೀಕಿನ ವಿಚಾರ:—

ಟೀಕು ಬರೆದವನು ಯಾರೋ ಗೊತ್ತಿಲ್ಲ. ಅವನು ಬಹುಶ್ರುತನು, ಬಹು ಸಮರ್ಥನು ಆಗಿರಬೇಕೆಂದು ಅವನ ಟೀಕುಗಳಿಂದ ಗೊತ್ತಾಗುತ್ತದೆ. ಈ ಟೀಕು ಪ್ರಸಿದ್ಧವಾದ ರಘುವಂಶಾದಿಗಳಿಗಿರುವ ವೆದ್ದಭಟ್ಟನೆಂದು ಪ್ರಸಿದ್ಧನಾದ ಕೋಲಚಲಮಲ್ಲಿನಾಥಸೂರಿಯ ಟೀಕೆಗೆ ಸರಿಸಮವಾಗಿದೆ. ಸಾಮಾನ್ಯವಾಗಿ ಕನ್ನಡದ ಪದ್ಯಗಳಿಗೆ ಹೇಗೆ ಅರ್ಥವನ್ನು ಯೋಚಿಸಬೇಕೆಂಬುದನ್ನು ಈ ಟೀಕಿನಿಂದ ಕಲಿಯಬೇಕಾಗಿದೆ. ಟೀಕಿನ ವಾಕ್ಯಶೈಲಿಯೂ ಬಹುರಮಣೀಯವಾಗಿದೆ.

ಮುದ್ರಣ ವಿಚಾರ:—

ಈ ಗ್ರಂಥವು ನಾಲ್ಕು ಪ್ರತಿಗಳ ಸಹಾಯದಿಂದ ಮುದ್ರಿತವಾಗಿದೆ. ಅವುಗಳಲ್ಲಿ ಎರಡು ಟೀಕಾಸಮೇತವಾದುವು; ಮತ್ತೆರಡು ಬರೀಮೂಲವುಳ್ಳವು. ಮೂಲಮಾತ್ರವಿರುವ ಪ್ರತಿಗಳಲ್ಲಿ ಲೇಖಕರು ತಮಗೆ ತೋರಿದಹಾಗೆ ಪದ್ಯಗಳನ್ನು ತಿದ್ದಿರುವುದೂ ಅಲ್ಲದೆ ಸ್ವಕೃತವಾದ ಇಲ್ಲ ಪರಕೃತವಾದ ಅನೇಕ ಹೊಸಪದ್ಯಗಳನ್ನು ಬರೆದು ಅಲ್ಲಲ್ಲೆ ಸೇರಿಸಿರುತ್ತಾರೆ.

ಈ ನಾಲ್ಕು ಪ್ರತಿಗಳಲ್ಲಿ ಮೂರುಪ್ರತಿಗಳನ್ನು ದಯೆಯಿಂದ ಕೊಡಿಸಿಕೊಟ್ಟುದಕ್ಕಾಗಿ ಮ॥ ರಾ॥ ಮಹದೇವಶಾಸ್ತ್ರಿಗಳವರಿಗೆ ಬಹಳ ಕೃತಜ್ಞನಾಗಿರುತ್ತೇನೆ.

# ವಿ ಷ ಯ ಸೂ ಚಿ .

# ಭಿಕ್ಷಾಟನ ಚರಿತೆ.

|| ವಾರ್ಧಕಷಟ್ಪದಿ ||

ಸೂಚನೆ :—

ಧರೆಯೊಳಗೆ ಗೋಪಾಲಕೃಷ್ಣ ಪದಿನಾಱು ಸಾ |
ವಿರ ಗೋಪಿಯರೊಳಿಪುದ ನೋಡ ಬೇಕೆಂದು ಪುರ |
ಪರನು ಭಿಕ್ಷುಕನಾಗಿ ದ್ವಾರಾವತಿಗೆ ಬಂದ ಪರಿಯನದ ವರ್ಣಿಸುವೆನು ||

ಟೀಕು—ಭೂಮಿಯಲ್ಲಿ ಗೋವುಗಳ ರಕ್ಷಿಸಿದ ಶ್ರೀ ಕೃಷ್ಣನು ಹದಿನಾಱು ಸಾವಿರ ಸ್ತ್ರೀಯರೊಡನೆ ವಿನೋದದಿಂದ ಸುಖಿಸುತ್ತಿರ್ಪುದ ನೋಡಬೇಕೆಂದು ಪ್ರೀತಿಯಿಂದ ಪುರಹರನಾದ ಶಿವನು ಭಿಕ್ಷುಕನಾಗಿ ದ್ವಾರಾವತಿಯೆಂಬ ಪಟ್ಟಣಕ್ಕೆ ಬಂದನು ಎಂಬುದೀ ಪಲ್ಲವದರ್ಥ.

ಶ್ರೀಮದಮೃತಮಯೂಖಲೇಖಾವತಂಸನಭಿ |
ರಾಮಸುರಗಂಗಾತರಂಗೋತ್ತಮಾಂಗನಗ |
ಜಾಮನೋಹರನಖಿಳವಿನತಜನಕರ್ಮಾಂಧಕಾರನಿರ್ಹರಣಸೂರಂ ||
ಸಾಮಗಾನಪ್ರೇಮನಗಣಿತಸುರಾಸುರ |
ಸ್ತೋಮವಂದಿತನೆಮ್ಮವಂ ಸಲಹುಗನುದಿನಂ |
ಶ್ರೀಮಹೇಶಂ ಸದಾಕೈಲಾಸವಾಸಂ ಕೃಪಾಳು ನಂದಿಗಿರೀಶನು || ೧ ||

ಟೀಕು—ಕವೀಶ್ವರನು ಕಾವ್ಯಪ್ರಾರಂಭದಲ್ಲಿ ಆಶೀರ್ವಾದ ನಮಸ್ಕ್ರಿಯಾ ವಸ್ತುನಿರ್ದೇಶಂಗಳೆಂಬ ಮಂಗಳಾಚರಣತ್ರಯಂಗಳು ಮಾಡಪಡಬೇಕಾದುವಾಗುದರಿಂದ ನಂದಿಗಿರೀಶನು ರಕ್ಷಿಸಲಿ ಎಂದು ಸ್ತೋತ್ರವಂ ಮಾಡುತಿರ್ದಾನು. ಶ್ರೀಮತ್ = ಆಶ್ಚರ್ಯಕರವಾದ, ಅಮೃತಮಯೂಖ = ಅಮೃತಕರನಾದ ಚಂದ್ರನ, ಲೇಖಾವತಂಸಂ = ಕಲೆಯನ್ನು ಶಿರಸ್ಸಿನಲ್ಲಿ ತಾಳಿದಾತನು, ಅಭಿರಾಮ = ಮನೋಹರವಾದ, ಸುರಗಂಗಾ = ದೇವಗಂಗೆಯ, ತರಂಗ = ಅಲೆಗಳಿಂದ ಅಲಂಕಾರವಾದ, ಉತ್ತಮಾಂಗಂ = ಶಿರಸ್ಸನುಳ್ಳ ಮಹಾದೇವನು, ಅಗಜಾಮನೋಹರನು = ಪಾರ್ವತೀದೇವಿಯರ ಮನಸ್ಸಿಗೆ ಅತ್ಯಂತ ಸೌಂದರ್ಯವ ತೋಱುವಾತನು, ಅಖಿಲ ವಿನತಜನಕರ್ಮಾಂಧಕಾರ = ನಮಸ್ಕಾರವ ಮಾಡಿದಂಥ ಜನರುಗಳ ಪಾಪವೆಂಬ ಕತ್ತಲೆಯನು, ನಿರ್ಹರಣಸೂರಂ = ಅಡಗಿಸುವಲ್ಲಿ ಸೂರ್ಯನಾದಂಥ ಆತನು, ಸಾಮ

ಗಾನಪ್ರೇಮಂ=ಸಾಮವೇದಸಮ್ಮತವಾದ ಗಾನದಲ್ಲಿ ಪ್ರೀತಿಯನುಳ್ಳಾತನು, ಅಗಣಿತಸುರಾಸುರಸ್ತೋಮವಂದಿತಂ= ರಾಕ್ಷಸರುಗಳಿಂದ ದೇವತಾಸಮೂಹಗಳಿಂದ ವಂದಿಸಿಕೊಳ್ಳಲುಪಟ್ಟ, ಶ್ರೀಮಹೇಶಂ=ಸಮಸ್ತ ದೇವೋತ್ತಮನಾದ ಪರಮೇಶ್ವರನು, ಕೈಲಾಸವಾಸಂ=ಕೈಲಾಸವೇ ಮನೆಯಾದ, ಕೃಪಾಳು=ದಯಾಶೀಲನಾದ, ನಂದಿಗಿರೀಶನು=ನಂದಿಗಿರಿಗೆ ಕರ್ತೃವಾದ ನಂದೀಶ್ವರನು, ಎಮ್ಮುವಂ ಸಲಹುಗನುದಿನಂ=ಆವಾಗಲೂ ತನ್ನನು ಶಿವಭಕ್ತರನು ಸರ್ವಕಾಲವು ರಕ್ಷಿಸುತಿರಲಿ, ಎಂದು ಕವೀಶ್ವರನು ಕಾವ್ಯಪ್ರಾರಂಭದಲ್ಲಿ ಆಶೀರ್ವಾದ ಮಾಡುತಿರ್ದಾನು.

ನಿರತನಿರ್ಮಳಚಿತ್ತವಡೆದೀಶ್ವರಧ್ಯಾನಿ |
ಹರ ಶಾಂತನೇಕೈಕಲಿಂಗಾನುಸಂಧಾನಿ |
ಭರಿತಪರಮಾನಂದಮೋಕ್ಷಸಂಪದ್ದಾನಿ ವೀರಶೈವಾಭಿಮಾನಿ ||
ಅರಿವಿಕಾರಗುಣಂಗಳಂಟದ ಸಮಾಧಾನಿ |
ಶರಣಸನ್ನಿಹಿತಸ್ಥಲದ ಸಹಜಸುಮ್ಮಾನಿ |
ಕರುಣಿ ಮದ್ಗುರು ಶಿವಜ್ಞಾನಿ ಬಸವೇಶ್ವರನ ಚರಣಕಭಿವಂದಿಸುವೆನು||೨||

ಟೀಕು—ಕವೀಶ್ವರನು ಬಸವೇಶ್ವರನ ಸ್ತೋತ್ರವಂ ಮಾಡುತಿರ್ದಾನು. ಬಸವೇಶ್ವರನು ಎಂಥ ಆತನು ಎಂದರೆ, ನಿರತನಿರ್ಮಳಚಿತ್ತವಡೆದೀಶ್ವರಧ್ಯಾನಿ=ಆವ ಕಾಲದಲ್ಲಿಯೂ ನಿರ್ಮಲವಾದ ಚಿತ್ತದಿಂದ ಶಿವನ ಬಿಡದೆ ಧ್ಯಾನಿಸುವಾತನು, ಹರ=ಪಾಪವ ಸಂಹರಿಸುವಾತನು, ಶಾಂತ=ರಾಗದ್ವೇಷವಿಲ್ಲದಾತನು, ಏಕೈಕಲಿಂಗಾನುಸಂಧಾನಿ=ಅದ್ವಿತೀಯವಾದ ಲಿಂಗದೊಡನೆ ಒಡವೆರೆದ ಸಂಧಾನವನುಳ್ಳಾತನು, ಭರಿತಪರಮಾನಂದ ಮೋಕ್ಷಸಂಪದ್ದಾನಿ=ಪೂರ್ಣವಾದ ಪರಮಾನಂದದೊಡನೆ ಕೂಡಿದ ಮೋಕ್ಷಲಕ್ಷಣವನು ಕೊಡುವಾತನು, ವೀರಶೈವಾಭಿಮಾನಿ= ವೀರಶೈವಾಚಾರಮಾರ್ಗವನು ಬಿಡದೆ ಆಚರಿಸುವಾತನು, ಅರಿವಿಕಾರಗುಣಂಗಳಂಟದ ಸಮಾಧಾನಿ= ಕಾಮಾದಿ ಅರಿಷಡ್ವರ್ಗಂಗಳು ತನ್ನನು ಸೋಂಕದ ಮರ್ಯಾದೆಯಿಂದ ಆಚರಿಸುವ ಸೈರಣೆಯನುಳ್ಳಾತನು, ಶರಣಸನ್ನಿಹಿತಸ್ಥಲದ ಸಹಜಸುಮ್ಮಾನಿ=ಶಿವಶರಣರ ಭಕ್ತಾದಿಕ್ಯಸ್ಥಲಾಂತ್ಯವಾದ ಆರು ಸ್ಥಳದಲ್ಲಿ ನಿಂದ ಸಹಜಮಾರ್ಗಕ್ಕೆ ಸೋಡಿ ಸಂತಸಂಬೀರುವಾತನು, ಕರುಣಿ=ದಯಾಶೀಲನಾದಾತನು, ಮದ್ಗುರು=ಎನಗೆ ವೇದದೀಕ್ಷೆ ಮಂತ್ರದೀಕ್ಷೆ ಕ್ರಿಯಾದೀಕ್ಷೆಗಳೆಂಬ ದೀಕ್ಷಾತ್ರಯವ ಮಾಡಿ ನನ್ನ ಪಾಲಿಸಿದ, ಶಿವಜ್ಞಾನಿಯಾದ, ಬಸವೇಶ್ವರನ ಚರಣಕಭಿವಂದಿಸುವೆನು=ದ್ವಿತೀಯಶಂಭುವಾದ ಕಲ್ಯಾಣಪಟ್ಟಣದಲ್ಲಿ ಬಿಜ್ಜಳರಾಯನ ಕೂಡೆ ಮುನ್ನೂರು ಅರುವತ್ತು ಪವಾಡವ ತೋರಿ ಮೆರೆದ ಬಸವೇಶ್ವರನ ಶ್ರೀಪಾದಪದ್ಮಂಗಳಿಗೆ ನಮಸ್ಕಾರವು, ಎಂದ. ಕವೀಶ್ವರನು ಬಸವೇಶ್ವರನ ಸ್ತೋತ್ರವಂ ಮಾಡುತಿರ್ದಾನು.

ಪರಮಗುರು ಬಸವೇಶನಂ ಚೆನ್ನಬಸವನಂ ।
ಸರಸಾಲ್ಲಮಾಚಾರ್ಯನಂ ರೇವಣಾರ್ಯನಂ ।
ಶರಣಮಡಿವಳ ಮಾಚಿದೇವನಂ ಸಿದ್ಧರಾಮನ ಮಾದಿರಾಜಯ್ಯನಂ ॥
ಧರೆಯೊಳಿವರೊಳಗಾದಸಂಖ್ಯಾತರುಗಳ ಶ್ರೀ ।
ಚರಣಮಂ ನೆನೆದು ಬಲಗೊಂಡು ಪೇಳುವೆನುಮಾ ।
ವರನ ಸ್ಮರಹರನ ಶಶಿಧರನನಜನ ಕಪಾಲಕರನ ಭಿಕ್ಷಾ ಚರಿತೆಯಂ ॥ ೩ ॥

ಟೀಕು— ಕವೀಶ್ವರನು ಅಸಂಖ್ಯಾತಗಣಂಗಳ ನೆನೆದು ಕಾವ್ಯವ ಹೇಳು ತಿರ್ದಾನು. ಅವರಾರಾರು ? ಎಂದರೆ, ಪರಮಗುರುಬಸವೇಶನಂ—ಮೂಱುಲೋಕದಲ್ಲಿರ್ದ ಶಿವಭಕ್ತರಿಗೆ ಗುರುಭಕ್ತಿ ಲಿಂಗಭಕ್ತಿ ಜಂಗಮಭಕ್ತಿಗಳನು ಆಚರಿಸಿ ಕಲಿಸುವಲ್ಲಿ ಗುರುವಾಗಿ ಬಂದ ಬಸವೇಶ್ವರನನೂ ; ಚೆನ್ನಬಸವನಂ—ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯವೆಂಬ ಷಟ್ಸ್ಥಲದಲ್ಲಿ ಆಚರಿಸುವರ ಆಱುದು ಪೂಜಿಸುವ ಸುಜ್ಞಾನಿ ಚೆನ್ನಬಸವಣ್ಣನನೂ ; ಸರಸಾಲ್ಲಮಾಚಾರ್ಯನಂ—ಕರಸ್ಥಲದ ಲಿಂಗದಲ್ಲಿ ದೃಷ್ಟಿ ನೆಟ್ಟು ಮನವಡಗಿ ಭಾವವೇಕೀಕರಿಸಿ ತನುಗುಣವಱಿದ ಅಲ್ಲಮಪ್ರಭುದೇವರನೂ ; ರೇವಣಾರ್ಯನಂ—ಯೋನಿಜನಲ್ಲದೆ ಲಿಂಗಗರ್ಭದಿಂದ ಕಂತೆ ದಂಡ ಕಮಂಡಲುವೆರಸಿ ಕೊಲ್ಲಿಪಾಕದ ಸೋಮೇಶ್ವರನ ಗರ್ಭದಿಂದುದಿಸಿ ಜಗದ್ಗುರುವಾದ ರೇವಣಸಿದ್ಧೇಶ್ವರನ ಪಾದವನೂ ; ಶರಣಮಡಿವಳ ಮಾಚಿದೇವನಂ—ಶಿವಶರಣರು ಬೇಡಿದ ಇಷ್ಟವ ಕೊಟ್ಟು ಮನದ ಮಲಿನವ ತೊಳೆದು ಶುದ್ಧಕಾಯದಿಂ ಆಚರಿಸುವ ಮಡಿವಳ ಮಾಚಿತಂದೆಗಳ ಪಾದಪದ್ಮವನೂ ; ಸಿದ್ಧರಾಮನಂ—ಯೋಗಮಾರ್ಗದಿಂದ ......................................
ಧರೆಯೊಳಿವರೊಳಗಾದ ಅಸಂಖ್ಯಾತರುಗಳ ಶ್ರೀಚರಣಮಂ—ಭೂಮಿಯಲ್ಲಿ ಇರ್ದವರು ಮೊದಲಾದ ಅಸಂಖ್ಯಾತಗಣಂಗಳ ಪಾದಕಮಲವಂ ನೆನೆದು, ಬಲಗೊಂಡು, ಉಮಾವರನ—ಪಾರ್ವತೀಕಾಂತನಾದ, ಶಶಿಧರನ—ಚಂದ್ರಮೌಳಿಯಾದ, ಸ್ಮರಹರನ—ಕಾಮಸಂಹಾರಿಯಾದ, ಅಜನ ಕಪಾಲಕರನ—ಬ್ರಹ್ಮನ ಕಪಾಲವನು ಕೈಯ್ಯಲ್ಲಿ ಧರಿಸಿದ ಶಿವನ, ಭಿಕ್ಷಾ ಚರಿತೆಯಂ—ಭಿಕ್ಷಾಟನ ಚರಿತ್ರವನು, ಪೂರ್ವದಲ್ಲಿ ಸೂತ ಮುನೀಶ್ವರನು ನೈಮಿಶಾರಣ್ಯವಾಸಿಗಳಾದ ಋಷಿಗಳಿಗೆ ಹೇಳಿದ ಕಥೆಯನು, ಹೇಳುವೆನು, ಎಂದು ಕವೀಶ್ವರನು ಹೇಳುತಿರ್ದಾನು.

ಶರಧಿ ಗಿರಿ ಪುರ ನೃಪ ಕುವರ ಮಂತ್ರಿ ದೂತ ಸಂ ।
ಗರ ವಿರಹ ಪರಿಣಯ ಸುರತವಂಬುಕೇಳಿ ದಿನ ।
ಕರ ಚಂದ್ರ ಮಧು ವನ ಗಮನ ಋತುಗಳೆನಿಪ ಪದಿನೆಂಟು ವರ್ಣನೆಗಳಿಂದ॥

ಪಿರಿದಾದ ಕಬ್ಬಂಗಳಿರಲು ಭಿಕ್ಷಾಟನದ |
ಚರಿತೆಯೇನೆಂದೆನ್ನದಿರಿ ನರಸ್ತುತಿಯುಳ್ಳ |
ಚರಿತೆಗಳೊಳಂತಿದಕೆ ಚರಿತೆಯೊಂದೆನೆ ಪೇಳ್ವೆನವಧರಿಸಿ ಸರ್ವಜ್ಞರು † ||೪||

ಟೀಕು—ಕವೀಶ್ವರನು ಸರ್ವವನು ಬಲ್ಲಂಥ ವಿವೇಕಿಗಳಿಗೆ ಬಿನ್ನಹವಂ ಮಾಡುತಿರ್ದಾನು. ಸಮುದ್ರವರ್ಣನೆ, ಗಿರಿವರ್ಣನೆ, ಪುರವರ್ಣನೆ, ಅರಸುಗಳ ವರ್ಣನೆ, ಅರಸುಮಕ್ಕಳ ವರ್ಣನೆ, ಮಂತ್ರಿಗಳ ವರ್ಣನೆ, ದೂತವರ್ಣನೆ, ಯುದ್ಧವರ್ಣನೆ, ವಿರಹವರ್ಣನೆ, ವಿವಾಹವರ್ಣನೆ, ಸುರತವರ್ಣನೆ, ಜಲಕೇಳೀವರ್ಣನೆ, ಸೂರ್ಯವರ್ಣನೆ, ಚಂದ್ರವರ್ಣನೆ, ಮಧುಪಾನವರ್ಣನೆ, ವನವರ್ಣನೆ, ಗಮನವರ್ಣನೆ, ಋತುವರ್ಣನೆಗಳೆಂಬ ಹದಿನೆಂಟು ವರ್ಣನೆಗಳಿಂದ ಅಲಂಕಾರವಾದ ಕಾವ್ಯಂಗಳಿರ್ದ ಹಾಂಗೆ, ಭಿಕ್ಷಾಟನವೇನುಂಟು? ಎನ್ನದಿರಿ. ಅದೇಕೆಂದರೆ—ಚರಿತೆಗಳೊಳಗಿದು ಉತ್ತಮವಾದ ಚರಿತೆ. ಅದು ಹೇಗೆ? ಎಂದರೆ; ಸರ್ವಜ್ಞರು ನೀವು ಕೇಳಿ, ನಾನು ಹೇಳೇನು ಎಂದು ಕವೀಶ್ವರನು ಹೇಳುತಿರ್ದಾನು.

ಸಿರಿ ಪೋದ ಬಳಿಕಾವನಾದಡಾಗಲಿ ಯವನು |
ವರರಕ್ಷಣಾರ್ಥ ಭಿಕ್ಷಾಚರಿತ್ರಂ ಕೆಟ್ಟ |
ವರಿಗೆಲ್ಲ ಕಟ್ಟ ಕಡೆಯಲಿ ಕೆಡದ ತಿರವಾದ ಬದುಕು ಭಿಕ್ಷಾಚರಿತೆಯು ||
ದರುಸನಂಗಳಿಗೆಲ್ಲ ಭಿಕ್ಷಾಟನಚರಿತ್ರ |
ಗುರುಮತವದಾಗಿರಲುಳಿದ ಚರಿತ್ರಗಳದಕೆ |
ಸರಿಯಿಲ್ಲವಾಗಿ ಪೇಳಿದೆ ಕೇಳುತಕ್ಕುದಿಂಪರಸ ಭಿಕ್ಷಾಚರಿತ್ರಂ ||೫||

ಟೀಕು—ಕವೀಶ್ವರನು ಭಿಕ್ಷಾಟನದ ಚರಿತ್ರವೇ ಅಧಿಕವೆಂದು ಯುಕ್ತಿಬಲದಿಂದ ಲೌಕಿಕ ಪರಮಾರ್ಥಕ್ಕೆ ಸಮ್ಮತವಾಗಿ ಹೇಳುತಿರ್ದಾನು. ಆವನಾದರೂ ಐಶ್ವರ್ಯ

---

† ಹೆಸರು ಹಾಲಯ್ಯನೆಂದುಣ್ಬುದಂಬಿಲವೊಂದು |
ಪುಸಿರುವರ ಗಾದೆಯಂತಲ್ಲವಿನ್ನೀಕೃತಿಯು |
ಪೆಸರು ಭಿಕ್ಷಾಟನದ ಚರಿತವಿದು ತಪ್ಪದೆನೆ ಪರಿಪರಿಯ ರುಚಿಯನುಳ್ಳ ||
ರಸಮಯಪದಾರ್ಥಗಳ ಮನೆಮನೆಯ ಸಾರಿಯರ |
ಪೊಸಬಗೆಯ ಶೃಂಗಾರಭಾವಗಳಲಂಕಾರ |
ವಿಸರವಿಂತಿದನೊಳೀಕ್ಷಿಸುವರುಂಟಾಗೆ ರಂಜಿಸುವುದೀಭೂತಳದೊಳು ||

ಎಂಬೀಪದ್ಯವು ಟಿಪ್ಪಣಿಯಿಲ್ಲದ ಒಂದು ಪ್ರತಿಯಲ್ಲಿ ಮಾತ್ರ ಇದೆ; ಅನ್ಯಕರ್ತೃಕವೆಂದು ತೋರುತ್ತದೆ.

ತೊಲಗಿದ ಬಳಿಕ ಭಿಕ್ಷಾವೃತ್ತಿಯಿಂದಮೆ ಜೀವಿಸುತ್ತಿಹನು. ಅದಲ್ಲದೆ ಕೆಲಬರು ಉತ್ತಮರು ತನುಗುಣವಳಿದು ಇಂದ್ರಿಯಂಗಳ ವರ್ತನೆ ಕೆಟ್ಟು ಮನ ನಿರ್ಮಲವಾದಲ್ಲಿ,

ಶ್ಲೋ॥ "ಶೈಶವೇಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ।
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ॥"

ಎಂಬ ವಾಕ್ಯಪ್ರಮಾಣದಿಂದ ವಯೋವೃದ್ಧರಾದವರು ಮುನಿವರ್ತನದಲ್ಲಿ ಆಚರಿಸುವುದಕ್ಕೆ ಭಿಕ್ಷಾಚರಿತ್ರವೇ ಪ್ರಧಾನ; ಅದಲ್ಲದೆ ಕೆಲಬರು ಉತ್ತಮರು ಆವ ದರ್ಶನಂಗಳಲ್ಲಿಯಾದರೂ ನಿತ್ಯಶ್ರಮವನು ಕೈಕೊಂಡರೆ ಭಿಕ್ಷಾಚರಿತ್ರವೇ ಪ್ರಧಾನವಾದ ಕಾರಣವಾಗಿ ಉಳಿದ ಚರಿತ್ರಂಗಳು ಭಿಕ್ಷಾಚರಿತ್ರಕ್ಕೆ ಸಮಾನವಲ್ಲ. ಭಿಕ್ಷಾ ಎಂದರೆ– ಅದಕ್ಕೆ ನಿರ್ವಚನ:—ಭಿಕ್ಷಾ ಎಂದರೆ ಕಾಲಕರ್ಮಾದಿಗಳಿಗೆ ಭೀತಿ; ಆ ಭೀತಿಗಳನು ಕ್ಷಯವ ಮಾಡುವುದರಿಂದ ಭಿಕ್ಷಾ ಎನಿಸಿಕೊಂಡಿತು. ಅದುಕಾರಣವಾಗಿ ಈಶ್ವರನು ಆಚರಿಸಿದ ಭಿಕ್ಷಾಟನದ ಚರಿತ್ರವು ಅಧಿಕವು. ಅದುದರಿಂದ ಉತ್ತಮರು ಕೇಳಿ ಎಂದು ಕವೀಶ್ವರನು ಬಿನ್ನಹವಂ ಮಾಡುತಿರ್ದನು.

ಇದು ಮಾನವರ ಸೃಷ್ಟಿಯಿಂದಾದ ಕಥನವೆ |
ನ್ನದಿರಿ ಪೂರ್ವದಲಿ ಸೂತಮಹಾಮುನೀಂದ್ರನತಿ |
ಮುದವಿನ್ನೈತರೆ ನೈಮಿಶಾರಣ್ಯದಲಿರ್ದ ಸನಕಾದಿಮುನಿಗಳಯ್ದೆ ||
ಇದಿರುಗೊಂಡು ಯಥೋಚಿತಕ್ರಿಯೆಗಳಿಂ ತಣಿಸಿ |
ತದನಂತರದೊಳಾಮುನೀಶ್ವರಗ ಭಿಕ್ಷಾಟ |
ನದ ಲೀಲೆಯಾದುದೇನು ನಿಮಿತ್ತವೆಂದು ಬೆಸಗೊಳ ವಿಸ್ತರಿಸುತಿರ್ದನು || ೬ ||

ಟೀಕು—ಇದು ಮಾನವರ ಸೃಷ್ಟಿಯಿಂದಾದ ಕಥನವೆನ್ನದಿರಿ = ಈ ಭಿಕ್ಷಾಟನದ ಚಾರಿತ್ರವು ಮನುಷ್ಯರು ಹೊತ್ತು ಹೋಂಕೆಗೆ ಹೇಳಿದ ಕಥೆಯೆನ್ನಬೇಡಿ. ಪೂರ್ವದಲ್ಲಿ ಸೂತಮಹಾಮುನೀಶ್ವರನು ಮುದದಿಂದ ಬರಲಾಗಿ ನೈಮಿಶಾರಣ್ಯದಲ್ಲಿದ್ದ ಸನಕಾದಿಮುನಿಗಳು ಇದಿರುಗೊಂಡು ನಮಿಸಿ ಅರ್ಘ್ಯಪಾದ್ಯಾಚಮನಂಗಳಿಂದ ಸತ್ಕರಿಸಿ, "ಎಲೈ ಸೂತಮಹಾಮುನೀಶ್ವರನೇ! ಶಿವನಿಗೆ ಭಿಕ್ಷಾಟನದ ಲೀಲೆಯು ಏನು ಕಾರಣ ಬಂದಿತು?" ಎಂದು ಮುನಿಗಳು ಕೇಳಲಾಗಿ; ಸೂತಮುನೀಶ್ವರನು ಹೇಳುತಿರ್ದನು.

ಇಳೆಯೊಳೀ ಕೃತಿಯ ಕಥನಾಲಾಪನೆಂತೆನಲು |
ಜಳಜಭವನೈದು ತಲೆಯೊಳಗೊಂದು ನಷ್ಟಸಲು |
ಪಳೆಯುರ್ಧ್ವಮುಖವಾಗಿ ಶಿವಗೆಱಗನೆಂದು ಬ್ರಹ್ಮನೆನೆ ಕಾಲಪರಸು ||

ಮುಳಿದೆಡದ ಕೆಯ್ಯುಗುರಿನಿಂದ ಚಿವುಟಿದಡುಳಿದ |
ತಲೆಯಿಂದಜಂ ಚತುರ್ಮುಖನಾದನರಿದ ಪಂ |
ದಲೆ ಬೊಬ್ಬಿರಿಯುತೆಲೆಲೆ ಪರಶಿವನೆ ಪಸಿದೆನೆಂದಾಹಾರವಂ ಬೇಡಿತು ||೨||

ಟೀಕು—ಸೂತಮುನೀಶ್ವರನು ನೈಮಿಶಾರಣ್ಯವಾಸಿಗಳಾದ ಋಷಿಗಳಿಗೆ ಪೇಳುತಿರ್ದಾನು. ಇಳೆಯೊಳೀಕೃತಿಯ ಕಥನಾಲಾಪವೆಂತೆನಲು = ಭೂಮಿಯಲ್ಲಿ ಶಿವನು ಭಿಕ್ಷಾಟನವ ಮಾಡಿದ ಕಥನಾಲಾಪವಾವ ಪ್ರಕಾರವೆಂದೆನಲಾಗಿ ; ಜಲಜಭವನೈದು ತಲೆಯೊಳಗೊಂದು ನಟ್ಟನಡುದಲೆಯೂರ್ಧ್ವಮುಖವಾಗಿ = ಬ್ರಹ್ಮನ ಐದು ತಲೆಯೊಳಗೆ ಊರ್ಧ್ವವಾದ ಒಂದು ನಡುದಲೆಯು ಅಹಂಕರಿಸಿ ಅಹಂಬ್ರಹ್ಮವೆಂದು ಶಿವನಿಗೆ ಎಱಗದಿರಲಾಗಿ ; ಕಾಲಹರನು = ಯಮಸಂಹಾರಿಯಾದ ಈಶ್ವರನು, ಮುಳಿದು = ಕೋಪವಂ ಮಾಡಿ, ಇವನಿಗೇಕೆ ಇಷ್ಟು ಎಂದು ಉದಾಸೀನದಿಂದ ಎಡದ ಕೆಯ್ಯುಗುರಿನಿಂದ ಚಿವುಟಿದರೆ : ಅದಕ್ಕೆ ಶ್ಲೋಕ—" ಚಕರ್ತ ಕರಜಾಗ್ರೇಣ ಬ್ರಹ್ಮಣಃ ಪಂಚಮಂ ಶಿರಃ " ಎಂಬೀ ಬ್ರಹ್ಮಾಂಡ ಪುರಾಣದ ವಾಕ್ಯದಿಂದ ಶಿವನು ತನ್ನೆಡಗೆಯ್ಯುಗುರಿನಿಂದ ಬ್ರಹ್ಮನ ಊರ್ಧ್ವಮುಖವನು ಚಿವುಟಲಾಗಿ, ಅಜನು ಅಂದಿನಿಂದ ಚತುರ್ಮುಖನಾದನು. ಆಗಲಾ ಅರಿದ ಪಂದಲೆ ಪರಶಿವನೆ ಪಸಿದೆನೆಂದಾಹಾರವಂ ಬೇಡಿತು = ಆ ಬ್ರಹ್ಮಕಪಾಲವು " ಎಲೆ ಸ್ವಾಮಿ ! ಆಹಾರವ ಪಾಲಿಸು " ಎಂದು ಬೇಡಿತು, ಕಾಣಿರೈ ಎಲೈ ಮುನಿಗಳಿರಾ ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಕಡೆಗೆ ಕಾಲಾಗ್ನಿ ಕವಿವಟ್ಟೆ ಮೂಲೋಕಮಂ |
ಸುಡುವೆನೆಂದುರಿ ಮಸಗುವಂತೆ ಶಿಖಿಯಾಗಿ ಬೊ |
ಬ್ಬಿಡುವ ಶಿರದಬ್ಬರವ ಕೇಳಿ ಶಶಿ ಫಣಿ ಬೆದಱೆ ಪೊಡೆವೆರಡು ಭಾಗಮಾಡಿ||
ಕಡಲೊಳಿಡಲೊಡನೆ ಬಂಬಲುಗಿಡಿಯು ಗಡಣದಿಂ |
ಬಡಬನೊಡಗೂಡಿತೊಂದುಳಿದೊಂದು ಭಾಗಮಂ |
ಪಿಡಿದು ಭೂತೇಶ್ವರಂ ಭಿಕ್ಷಾಟನಕೆ ನಡೆವನೆಂಬ ಕಾಲೋಚಿತದೊಳು ||

ಟೀಕು—ಕೇಳಿರೈ, ಎಲೈ ಮುನಿಗಳಿರಾ ! ಆ ಪರಮೇಶ್ವರನ ಕೆಯ್ಯೊಳಗಿರ್ದ ಬ್ರಹ್ಮಕಪಾಲದಲ್ಲಿ ರಕ್ತಹೊಱವಂಟು ತೆರೆಮಸಗಿ ಸಮುದ್ರೋಪಮಾನವಾಗಿ ಲೋಕವೆಲ್ಲವಾಗ್ರಹಿಸಿಕೊಂಬುದ ಶಿವನು ಕಂಡು ನಸುಗೋಪದಿಂದ ನೊಸಲ ಕಣ್ಣ ತೆಗೆದೊಂದು ಚಿಕ್ಕ ಕಿಡಿಗೆ ಬೆಸಸಲಾಗಿ; ಆ ಕಿಡಿಯು ಆ ರಕ್ತವೆಲ್ಲವನು ಹೀಱಿ ಆ ಕಪಾಲದೊಳಗಿರ್ದ ಮಾಂಸ ಮಜ್ಜೆ ಮೊದಲಾದ ಧಾತುಗಳೆಲ್ಲವನು ನುಂಗಿ ತಲೆಯನು ಬುರುಡೆಯ ಮಾಡಿಹ ಸಮಯದಲ್ಲಿ; ಆ ತಲೆ ಬೊಬ್ಬಿಟ್ಟು ಕಾಲಾಗ್ನಿಯಂದದಿ ಅಬ್ಬರಿಸೆ

ಭಯಂಕರರವಂ ಬೀಱುತ್ತಿರ್ದ ಆ ಶಿರಸ್ಸ ಕಂಡು ಶಿವನ ಶರೀರದಲ್ಲಿ ಆಭರಣವಾಗಿರ್ದ ಸರ್ಪಂಗಳು ಬೆದಱುತ್ತಿರೆ; ಮಸ್ತಕದ ಮೇಲೆ ಇರ್ದ ಚಂದ್ರಕಳೆ ಅಂಜುತ್ತಿರಲಾಗಿ; ಪೊಡೆದೆರಡು ಭಾಗಮಾಡಿ = ಆ ಶಿರಸ್ಸ ಹೊಯ್ದು ಎರಡು ಹೋಳಮಾಡಿ ಸಮುದ್ರಕ್ಕೆ ಒಂದು ಹೋಳನಿಡಲಾಗಿ; ಅದು ಬಡಬಾಗ್ನಿಯು ಕೂಡಿಕೊಂಡಿತು. ಮತ್ತೊಂದು ಹೋಳನು ಭೂತೇಶ್ವರನು ಕೈಯ್ಯಲ್ಲಿ ಪಿಡಿದು ಭಿಕ್ಷಾಟನಕ್ಕೆ ಹೋಗಬೇಕೆಂದು ಉದ್ಯೋಗಿಸಿದ ಕಾಲೋಚಿತಕ್ಕೆ ನಾರದಮುನೀಶ್ವರನು ಬಂದನು, ಕಾಣಿರೈ ಎಲೈ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ನಾರದಮುನೀಂದ್ರನೈತಂದು ಪದಕೆಱಗೆ ಮದ |
ನಾರಿ ನಸುನಗುತಿದೆಲ್ಲಿಂದ ಬಂದೆ ಮಾಯಾ |
ಧಾರಿ ವಿಶ್ವಪ್ರಪಂಚವಿಹಾರಿಯೆನೆ ಮರ್ತ್ಯದಿಂದೆಂದಡಂತಲ್ಲಿಯಾ ||
ಚಾರುವಾರ್ತಾವಿಶೇಷವದೇನೆನಲು ದೇವ |
ದ್ವಾರಾವತಿಯೊಳು ಶ್ರೀಕೃಷ್ಣ ಷೋಡಶಸಹಸ್ರ |
ನಾರಿಯರೊಳಲ್ಲಿ ನೋಡಿದಡಲ್ಲಿ ತಾನಾಗಿಹುದ ಕಂಡೆನೆಂದೆನಲ್ಕೆ || ೯ ||

ಟೀಕು—ಎಲೈ ಮುನಿಗಳಿರಾ! ನಾರದಮುನೀಂದ್ರನೈತಂದು ಶಿವನ ಪಾದಕಮಲಕ್ಕೆ ನಮಸ್ಕರಿಸಲಾಗಿ; ಮದನಾರಿಯಾದ ಮಹಾದೇವನು "ಎಲೆ ಮಾಯಾಧಾರಿಯಾದ, ವಿಶ್ವಪ್ರಪಂಚವನಱಿದು ವಿಹರಿಸುವುದ ಬಲ್ಲ ನಾರದಮುನೀಂದ್ರ! ಎಲ್ಲಿಂದ ಬಂದೆಯಯ್ಯಾ?" ಎಂದು ಕೇಳಲಾಗಿ; "ಎಲೈ ಸ್ವಾಮಿ! ಮರ್ತ್ಯಲೋಕಕ್ಕೆ ಹೋಗಿ ಬಂದೆನು" ಎಂಬ ಬಿನ್ನಪಕ್ಕೆ ಶಿವನು ಸಂತೋಷದಿಂದ ಅಲ್ಲಿಯ ವಾರ್ತಾವಿಶೇಷವೇನೆಂದು ಕೇಳಲಾಗಿ; "ಎಲೆ ಮಹಾದೇವ, ದ್ವಾರಾವತಿಯೆಂಬ ಪಟ್ಟಣದಲ್ಲಿ ದೇವಕೀ ಕುಮಾರನಾದ ಶ್ರೀಕೃಷ್ಣನು ಹದಿನಾಱು ಸಾವಿರ ಸ್ತ್ರೀಯರೊಳಗೆ ತಾನೊಬ್ಬನೇ ಎಲ್ಲಾ ಸ್ತ್ರೀಯರುಗಳಿಗೆ ಬೇಱೆಬೇಱೆ ಸ್ವರೂಪನಾಗಿ ಸುಖಿಸುವ ಚಿತ್ರವಂ ಕಂಡು ಬಂದೆನು" ಎಂದು ನಾರದಮುನಿಯು ಈಶ್ವರನಿಗೆ ಬಿನ್ನಹಂಮಾಡಿದನು, ಕಾಣಿರೈ ಎಲೈ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಆ ವಿಗಡಮುನಿಯ ಬಿನ್ನಪಗೇಳುತೊಡನೆ ಭೂ |
ದೇವತೆಯ ಭಾರವಿಳುಹುವ ಕಾರ್ಯವೊಂದು ರಾ |
ಜೀವಸಂಭವನ ಪಂಬಲೆಯೋಡಿಗಾಹುತಿಯನೀವ ಕಾರಣವದೊಂದು ||
ಗೋವಳಂ ಗೋಪಸತಿಯರೊಳಿಹುವ ನೋಟ್ಪೆನಂ |
ಬಾವಿನೋದವದೊಂದು ಕೂಡಿ ಮುಪ್ಪುರಿಯಾದ
ದೇವನುತ್ಸವದಿಂದ ಭಿಕ್ಷಾಟನಕೆ ನಡೆದ ಲೀಲೆಯನದೇನೆಂಬೆನು ||೧೦||

ಟೀಕು—ಕೇಳಿರೈ ಎಲೈ ಮುನಿಗಳಿರಾ! ಆ ಬಿಗಡಮುನಿಯು ಬಿನ್ನಹಗೇಳು ತೊಡನೆ = ಆ ವಿಗಡನಾದ ನಾರದಮುನಿಯು ಬಿನ್ನಹ ಹೇಳಲೊಡನೆ, ಆಲೋಚಿಸಿ ಕೊಂಡು ಭೂಮಿಯು ಭಾರವನಿಳುಹುವ್ಯದೆಂದು ಕಾರ್ಯ, ಕಮಲಸಂಭವನಾದ ಬ್ರಹ್ಮನ ಅರಿದ ತಲೆಗೋಡಿಗಾಯುತಿರ್ಪ ನೀವ ಕಾರಣವದೊಂದು, ಗೋವಳಂ ಗೋಪಸತಿಯರೊಳಿಹುದ ನೋಟ್ಪೆನೆಂಬ ವಿನೋದವದೊಂದು = ಗೋಪಾಲನಾದ ವಾಸುದೇವನು ಗೋಪಸ್ತ್ರೀಯರೊಡನೆ ವಿನೋದದಿಂದಿರ್ಪುದ ನೋಡಬೇಕೆಂಬುದೊಂದು ಕೂಡಿ ಮುಪ್ಪುರಿಯಾದ ಉತ್ಸಾಹದಿಂದ ಪುರಹರನಾದ ಮಹಾದೇವನು ಭಿಕ್ಷಾಟನಕ್ಕೆ ಹೊಱಪಂಟ ಠೀವಿಯನು ವಿನೆಂದು ಹೊಗಳಲಿ ಎಂದು ಸನಕಾದಿಮುನಿಗಳಿಗೆ ಸೂತಮುನೀಶ್ವರನು ಹೇಳುತಿರ್ದಾನು,

ನಿಱುನಿಱುಮನಂತರಂತರಕ್ಕೆಸು ಮೊನೆಯು ಮಱಂ |
ಜೆಱಗೆಸೆಯು ಹುಲಿಯು ಚರ್ಮವನುಟ್ಟು ವಾಸುಕಿಯ |
ನುರದೆಮುಜ್ಞೋಪವೀತವನಿಟ್ಟು ಮೆಯ್ವೆಸುಱುಪಾವುಗಳ ತೊಡವ ತೊಟ್ಟು ||
ಮಿಱುಗುವ ಮಣಿಕಿನ ಕುಂಡಲವ ಕಿವಿಯೊಳಾಂತಿಟ್ಟು |
ಹೆಱೆ ಬಾಂಗೊಱೆಯು ಪೊತ್ತ ಜಡೆಯನೆಡೆಗೊಟ್ಟು |
ನೊಸಲ ಪೊಸೆಯೊಳ್ ತ್ರಿರೇಖೆಯ ಬೊಟ್ಟು ಭಿಕ್ಷುವೇಷವ ತಾಳ್ದನಕ್ಕಿವಟ್ಟು ||

ಟೀಕು—ಕೇಳಿರೈ ಮುನಿಗಳಿರಾ! ಆ ಜಗದೀಶ್ವರನು ಭಿಕ್ಷಾಟನಕ್ಕೆ ಹೊಱ ಪಂಟು ಬರುವಲ್ಲಿ ಶೃಂಗರಿಸಿ ಕೊಂಡನು: ಅದು ಹೇಗೆಂದರೆ—ನಿಱುನಿಱುಗಳನು ಬೇಱೆಬೇಱೆ ಅಂಗಾಂಗದಲ್ಲಿ ಅಲಂಕರಿಸಿ, ಮೊನೆಜೆಱಗು ನೆಲನೋಂಕುವ ಮರ್ಯಾದೆಯಿಂದ ನೆಱಗನಿಳಿಯಬಿಟ್ಟು, ಹುಲಿಯ ಚರ್ಮವ ಬಿಗಿದು, ಸರಿಸಮವಾಗಿ ಉಟ್ಟು, ಮಹಾಶೇಷನ ಯಜ್ಞೋಪವೀತವನಿಟ್ಟು, ಎಳೆಯ ಹಾವುಗಳ ತೊಡಿಗೆಗಳ ತೊಟ್ಟು, ಮಿಱುಗುವ ಮಣಿಕಿನಂತೆಸೆವ ಸರ್ಪಕುಂಡಲಂಗಳ ಕರ್ಣಗಳಿಗೆ ಅಳವಡಿಸಿ, ಎಳೆಯದಾದ ಚಂದ್ರನ ಹೆಱೆಗೆ ದೇವಗಂಗೆಯೊಡನೆ ಕೂಡಲ್ಪಟ್ಟ ಜಟಾಮಕುಟವನು ಒಂದೆಡೆಯಾಗಿ ಮಡಗಿ ಕೊಟ್ಟು, ಹಣೆಯಲ್ಲಿ ವಿಭೂತಿಯಿಂದ ಅಲಂಕರಿಸಲ್ಪಟ್ಟ ತ್ರಿರೇಖೆಯ ನಡುವೆ ಕತ್ತುರಿ ಕುಂಕುಮವೆರೆದ ಶ್ರೀಗಂಧದ ಬೊಟ್ಟನಿಟ್ಟು, ಭಿಕ್ಷಾವೇಷವಂ ತಾಳ್ದನಕ್ಕ್ತಿವಟ್ಟು = ಅಲೆವಟ್ಟು ಜಗದೀಶ್ವರನು ಈ ಪ್ರಕಾರದಲ್ಲಿ ಭಿಕ್ಷಾಟನಕ್ಕೆ ಬರಬೇಕೆಂದು ಶೃಂಗರಿಸಿಕೊಂಡನು. ಕಾಣಿರೈ ಎಲೈ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಮೆಯ್ಯೊಳಗೆ ಕಾಮನಂ ದಹಿಸಿದ ಸುಭಸ್ಮವಿತ |
ಕೆಯ್ಯೊಳಗೆ ಹಿಡಿದ ಬ್ರಹ್ಮಕಪಾಲವಾಬಲದ |

ಕೈಯ್ಯೊಳಗೆ ಮೂಜಗವ ಕೊಂದು ಕೂಗುವನೆದೆಯನಿರಿವಮುಮ್ಮೊನೆಯಶೂಲ
ಒಯ್ಯನಡಿಯಿಡುವ ಮೆಲ್ಲಡಿಪಾವಡೆಯೊಳುರಗ |
ಶಯ್ಯನರ್ಚಿಸಿದ ಕಣ್ಣೆಸೆಯೆ ಭಿಕ್ಷಾಟನಂ |
ಗೆಯ್ಯಬೇಕೆಂದು ಮನವಂದು ಗುಹಗಣಪರುಗಳಯ್ಯ ಸಿಂಗರವಾದನು||೧೩||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಶಿವನಾವ ಪ್ರಕಾರದಲ್ಲಿ ಶೃಂಗಾರವಾದನು? ಎಂದರೆ—ಮೈಯ್ಯೊಳಗೆ ಕಾಮನಂ ದಹಿಸಿದ ಸುಭಸ್ಮ = ಕಾಮನ ಸುಟ್ಟ ವಿಭೂತಿಯ ಧೂಳಿಸಿಕೊಂಡು, ಎಡಗೈಯ್ಯೊಳಗೆ ಹಿಡಿದ ಬ್ರಹ್ಮನ ಕಪಾಲ ಎಡದಲ್ಲಿ ಬೊಬ್ಬಿಡುತ್ತಿರಲು, ಬಲದ ಕೈಯ್ಯಲ್ಲಿ ಮೂಜಗವ ಕೊಂದು ಕೂಗುವ ಯಮನೆದೆಯನಿರಿದ ಮೂಮೊನೆಯಿಂದ ಒಪ್ಪುವ ತ್ರಿಶೂಲವಂ ಪಿಡಿದು, ಮೆಲ್ಲಮೆಲ್ಲನೆ ಅಡಿಯನಿಡುವ ಪಾದಕಮಲದಲ್ಲಿ ಅನಂತಶಯನನಾದ ವಿಷ್ಣುವಿನ ನಯನವು ಒಪ್ಪುತ್ತಿರಲಾಗಿ, ಭಿಕ್ಷಾಟನವ ಮಾಡಬೇಕೆಂದು ಮನಬಂದು, ಗುಹಗಣಪರುಗಳಯ್ಯ ಸಿಂಗರವಾದನು = ಗುಹ-ಷಣ್ಮುಖನಿಗೂ, ಗಣಪ-ವಿಘ್ನೇಶ್ವರನಿಗೂ, ಅಯ್ಯ = ತಂದೆಯಾದಂಥ ಮಹಾದೇವನು, ಭಿಕ್ಷಾಟನಕ್ಕೆ ಹೋಗಬೇಕೆಂದು ಶೃಂಗರಿಸಿಕೊಂಡನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಕಾಲಕರ್ಮವನು ಪಾದುಕೆಗಳಾಗಿಯೆ ಮೆಟ್ಟಿ |
ಮೇಲೆನಿಸುವಷ್ಟ ಮಹಸಿದ್ಧಿಗಳನೇ ಕಕ್ಷ |
ಪಾಲವಾಗಿರುಕಿ ಯೋಗಾಂಗವನೆ ಯೋಗಪಟ್ಟಿಯಾಗಿ ಪೇರುರದೊಳಳುಪಿ||
ವ್ಯಾಳ ಕಡೆಯುಮದಾಗೆ ವೇದಾಗಮಪುರಾಣ |
ಜಾಲಂಗಳುಲಿವ ತೊಡರಾಗೆ ಕಣ್ಗೆಸೆವ ತ್ರಿ |
ಶೂಲಿ ವಿಷಮಕರೋಟಿಮಾಲಿ ದ್ರುಹಿಣಶಿರಃಕಪಾಲಿಯರ್ಧೇಂದುಮೌಳಿ ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಕೋಟಿಕಂದರ್ಪರೂಪವನು ಧರಿಸಿದ ಮಹಾದೇವನು ಭಿಕ್ಷಾಟನಕ್ಕೆ ಹೊರಟಿವಂತು ಬಪ್ಪಲ್ಲಿ, ಕಾಲಕರ್ಮಂಗಳೆರಡನು ಪಾದುಕೆಗಳಾಗಿಯೆ ಮೆಟ್ಟಿ, ಮೇಲೆನಿಸಿದ ಅಣಿಮಾ ಮಹಿಮಾ ಗರಿಮಾ ಲಘಿಮಾ ಪ್ರಾಪ್ತಿ ಪ್ರಾಕಾಮ್ಯ ಈಶತ್ವ ವಶಿತ್ವವೆಂಬ ಅಷ್ಟಮಹಾಸಿದ್ಧಿಗಳನೇ ಕಕ್ಷಪಾಲವಾಗಿ ಕೌಂಕುಳೊಳಗಿರುಕಿ, ಯೋಗಾಂಗವನೆ = ಅಷ್ಟಾಂಗಯೋಗವನೆ, ಜೋಗವಟಿಗೆಯಾಗಿ ಪೇರುರದೊಳ್ಕಿಂಬಿಟ್ಟು, ಮಹಾಶೇಷನಂ ಪಾದಕ್ಕೆ ಕಡೆಯವಾಗಿ ಧರಿಸಿ, ವೇದಾಗಮಪುರಾಣಂಗಳನು ಉಲಿವ ತೊಡರಾಗಿ ತಳೆದು, ತ್ರಿಶೂಲಪಾಣಿಯಾದಾತನು, ವಿಷಮವಾದ ತಲೆಗಳ ಮಾಲೆಯ ತೊಟ್ಟಾತನು, ದ್ರುಹಿಣಶಿರಃಕಪಾಲಿ = ಬ್ರಹ್ಮನ ಶಿರಸ್ಸನೇ ಕೈಯಲ್ಲಿ ಧರಿಸಿದಾತನು, ಅರ್ಧೇಂದುಮೌಳಿ = ಚಂದ್ರಮೌಳಿಯಾದ

ಜಗದೀಶ್ವರನು, ಈಪ್ರಕಾರ ಚೆಲುವಿಕೆಯಿಂದ ಹೊಱವಂಟನು ಕಾಣಿರೈ, ಎಂದು ಸೂತಮುನೀಶ್ವರನು ಹೇಳುತ್ತಿದ್ದಾನು.

ಸಱುಗಂಪ ಸವಿಯಲೆಂದೆಲರ ಬೆಂಬಳಿವಿಡಿದು |
ತುಱುಗಿ ಬಂಬಲುವಾಲೆಗೊಂಡು ಮಂಡಳಿಸಿ ಕೆದ |
ರ್ದೆರಲುಮಂ ಸರಿಗೊಂಡನೊಂದು ಮುಂಚುವೆನೆಂದು ಬಂದ ಝೇಂಕಾರದಿಂದ ||
ಎಱಪಳಿಗಳೋಳ್ಸೈಪ ಪರಿವಾರವೆನೆ ನಡುವೆ |
ಮೆಱೆವರಸು ತಾನಾಗಿ ತೋರ್ಪ ಕೇತಕಿಯ ಸು |
ಗ್ಗಿಱಿಯ ಕನ್ನೆಯ ಪೆಱೆನೊಸಲಿಯನಂದು ಕೈಲಾಸಪುರವ ಪೊಱಮಡುವಾಗಲು ||

ಟೀಕು — ಕೇಳಿರೈ, ಎಲೆ ಮುನಿಗಳಿರಾ! ಶಿವನು ಹೊಱವಂಟು ಬಪ್ಪಲ್ಲಿ, ಸಱುಗಂಪ ಸವಿಯಲೆಂದೆಲರ ಬೆಂಬಳಿವಿಡಿದು = ಪರಿಮಳವ ಕೊಂಬ ಇಚ್ಛೆಯಿಂದ ಗಾಳಿಯ ಬೆಂಬಳಿವಿಡಿದು ಬಂದು ಒಂದಕೊಂದು ತುಱುಗಿ ಬಂಬಲುವಾಲೆಯಿಂದ ಸಾಲ್ಗೊಂಡು ಮಂಡಳಿಸಿ ಕೆದರ್ದ ರೇಕುಗಳಿಂದ ಒಂದಕೊಂದು ಮುಂಚುವೃವೆಂದು ಝೇಂಕಾರಧ್ವನಿಯೊಡನೆ ಕೂಡಿ ಎಱಪಳಿಗಳೋಳ್ಸೈಪ ಪರಿವಾರವೆನೆ = ಬಳಸಿ ಬಂದು ನಿಂದ ತುಂಬಿಗಳೇ ಪರಿವಾರವೆಂಬ ಹಾಂಗೆ ಇರೆ, ನಡುವೆ ಮೆಱೆವರಸು, ತಾನಾಗಿ ತೋಱುತ್ತಿರ್ದ, ಕೇತಕಿಯ ಸುಗ್ಗಿಱಿಯ ಕನ್ನೆಯ = ಕೇತಕಿಯ ಪುಷ್ಪದ ಸುಣುಪಾದ ಗಱಿಯನು ಕನ್ನೆಯೊಳಿರಿಸಿಕೊಂಡು, ಎಳವೆಱೆಯ ತಳೆದ, ಕೋಮಲಾಂಗನಾದ ಮಹಾದೇವನು ಕೈಲಾಸಪುರವ ಹೊಱಡುವಾಗ ಆಸಂಭ್ರಮವ ಶಿವನೇ ಬಲ್ಲ ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತ್ತಿದ್ದಾನು.

ಗಿರಿಜೆ ನಿನ್ನರಮನೆಯೊಳಿರು ಪೋಗೆನುತ ಪಿಂತೆ |
ಬರೆ ಗುಹಗಣಪವೀರಭದ್ರರುಗಳಂ ಪುರದೊ |
ಳಿರಿಯೆಂದು ಸುರಪಾಗ್ನಿಯಮನಿಋತಿವರುಣವಾಯುಕುಬೇರಕೀಶಾನರಂ ||
ಇರಿ ನಿಮ್ಮ ತಾಣದೊಳಗಿರಿಯೆಂದು ಕಳುಪುತುಂ |
ಕರುಣಿ ಸಾಕ್ಷಾತ ಯೋಗಿಗಳ ಪರಮಾನಂದ |
ಸರಣಿ ಭವಭಯತಿಮಿರತರಣಿ ಸೆಸಿಸುವ ಹರಂ ಧರಣೀತಳಕೆ ಬಂದನು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ವಿನೋದಚರಿತ್ರನಾದ ಶಿವನು ಕೈಲಾಸಪುರವ ಹೊಱವಂಟು ಬಪ್ಪಲ್ಲಿ, ಗಿರಿಜೆ ನಿನ್ನರಮನೆಯೊಳಿರು ಪೋಗೆನುತ = ಅರಮನೆಯೊಳಿರು ಎಂದು ಅರ್ಧಾಂಗಿಯಾದ ಪಾರ್ವತಿಯುಂ ಕಳುಹಿ, ಹಿಂದುಗೊಂಡು ಬಱುತ್ತಿರ್ಪ ಷಣ್ಮುಖ ವಿನಾಯಕ ವೀರಭದ್ರ ನಂದಿ ಮಹಾಕಾಳ ಭೃಂಗಿರಿಟಿ ಮೊದಲಾದ ಗಣಂಗಳ ಕೈಲಾಸಪುರದಲ್ಲಿ ಇರಿ ಎಂದು ಕಳುಪುತ್ತ, ಇಂದ್ರ ಅಗ್ನಿ ಯಮ

ನಿರೃತಿ ವರುಣ ವಾಯು ಕುಬೇರ ಈಶಾನ ಮೊದಲಾದ ಅಷ್ಟ ದಿಕ್ಪಾಲಕರ ಕರೆದು ನಿಮ್ಮ ನಿಮ್ಮ ಸ್ಥಾನದಲ್ಲಿ ಇರಿ ಎಂದು ಕಳುಹಿಸುತ್ತ, ಕರುಣಿ, ಯೋಗಿಗಳ ಪರಮಾನಂದಸರಣಿ = ಶಿವಯೋಗಿಗಳಿಗೆ ಯಾವ ಕಾಲದಲ್ಲಿಯೂ ಸಾಕ್ಷಾತ್ ಪರಮಾನಂದಪೂರವಾದಾತನು, ಭವಭಯುತಿಮಿರತರಣಿ = ಜನ್ಮಾಂತರವೆಂಬ ಕತ್ತಲೆಯ ತೊಲಗಿಸುವ ಸೂರ್ಯನಾದ ಈಶ್ವರನು, ವಿನೋದದಿಂದ ಧರಣೀತಳಕ್ಕೆ ಬಂದನು ಕಾಣಿರೈ, ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತ್ತಿದ್ದಾನು.

ಸುರಪತಿಗೆ ತೆಗೆದೋಡಿ ಪೋಗಿ ಮೈನಾಕಗಿರಿ ।
ಶರಧಿಯಂ ಪುಗಲಂದು ತನ್ನ ಗೋತ್ರಕ್ಕೆ ಕುಂ ।
ದಿರದಪ್ಪುದೆಂದದಂ ಪೊಱಮಡಿಸೆ ವಜ್ರಿಗಿದಿರಾಗಿ ಸಂಗರವ ಮಾಳ್ಪ ॥
ಗಿರಿಗಳೆಂ ಎನಿಸ ಪೆರ್ದೆರೆಗಳಿಂ ಮಿಡುಕುಳ್ಳೊ ।
ಪರಿಗಳೆಂ ಎನಿಸ ಜೆಳ್ನೊರೆಗಳಿಂ ಕರುಳೆನಿಸ ।
ವರಮಣಿಗಳಿಂ ಸಮರಭೂಮಿಯಂತೆಸೆವುದಧಿಯಂ ನೋಡುತೈತಂದನು ॥೧೮

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಕವೀಶ್ವರನು ಸಮುದ್ರವ ವರ್ಣಿಸುತ್ತಿದ್ದಾನು. ಸಮುದ್ರ ಆವ ಪ್ರಕಾರದಲ್ಲಿ ಒಪ್ಪಿತ್ತು? ಎಂದರೆ—ಸುರಪತಿಗೆ ತೆಗೆದೋಡಿ ಪೋಗಿ ಮೈನಾಕಗಿರಿ ಶರಧಿಯಂ ಪುಗಲಂದು = ದೇವೇಂದ್ರಂಗೆ ಅಂಜಿ ಪೋಗಿ ಮೈನಾಕಪರ್ವತವು ಸಮುದ್ರವ ಹೊಗಲಾಗಿ, ತನ್ನ ಗೋತ್ರಕ್ಕೆ ಕುಂದಿರದಪ್ಪುದೆಂದು = ಗೋತ್ರವೆಂದರೆ—ಸಂತತಿ, ಗೋತ್ರವೆಂದರೆ—“ಅದ್ರಿಗೋತ್ರಗಿರಿಗ್ರಾವಾ” ಎಂದು, ಪರ್ವತಕ್ಕೆ ಹೆಸರು, ಆದಱಿಂದ ತನ್ನ ಕುಲಕ್ಕೆ ಕುಂದು ಬಂದೀತು ಎಂದು ಪರ್ವತವನು ಹೊಱವಡಿಸಲಾಗಿ, ವಜ್ರಪಾಣಿಯಾದ ದೇವೇಂದ್ರನ ಕೂಡೆ ಸಂಗರವ ಮಾಡುತ್ತಿರ್ದ ಬೆಟ್ಟಗಳೋ ಎಂಬ ಹಾಂಗೆ, ಒಂದಱ ಮೇಲೊಂದು ಒತ್ತೊತ್ತಿ ಮೇಲುವಾಯ್ವ ತೆರೆಗಳಿಂದ, ಯುದ್ಧವ ಮಾಡುವಲ್ಲಿ ಮಿದುಳೊಕ್ಕುವೋ ಎಂಬ ಮರ್ಯಾದೆಯಿಂದ ಒಪ್ಪುವ ಬೆಳ್ನೊರೆಯಿಂದ, ಕರುಳೋ ಎಂಬ ಮರ್ಯಾದೆಯಿಂದ ಒಪ್ಪುವ ರತ್ನಸಂತತಿಯಿಂದ, ಮೆಱೆಯುತ್ತಿರ್ದ, ಸಮರಭೂಮಿಯಂತೆ = ಕಾಳೆಗದ ಕಣದ ಮರ್ಯಾದೆಯಿಂದ ಮೆಱೆಯುತ್ತಿರ್ದ ಸಮುದ್ರವ ನೋಡುತ್ತ ಜಗದೀಶ್ವರನು ಬಂದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತ್ತಿದ್ದಾನು.

ಎಲ್ಲಿ ನೋಡಿದಡಲ್ಲಿ ಪರುಷರಸಪೂರ್ಣತೆಯಿಂ ।
ದೆಲ್ಲಿ ನೋಡಿದಡಲ್ಲಿಯಮೃತಮಯಸರಸಿಯಿಂ ।
ದೆಲ್ಲಿ ನೋಡಿದಡಲ್ಲಿ ರತ್ನಗಳ ತಪ್ಪಲಿಂ ಸುರಧೇನುವೆನಿಪ ಕೊಪ್ಪಲಿಂ ॥

ಎಲ್ಲಿ ನೋಡಿದಡಲ್ಲಿ ಹೊಳೆವ ಹೊಮ್ಮೃಗಗಳಿಂ ।
ದೆಲ್ಲಿ ನೋಡಿದಡಲ್ಲಿಯತಿಚಿತ್ರಖಗಗಳಿಂ ।
ದಲ್ಲಿಗಲ್ಲಿಗೆ ಕಣ್ಗೆ ಮಂಗಳವನೀವ ಮೇರುವ ನೋಡುತೈತಂದನು ॥ ೧೩

ಟೀಕು—ಕೇಳಿರೈ, ಮುನಿಗಳಿರಾ! ಆ ಶಿವನು ಹೋಗುವಂಟು ಬರುತ್ತಿರ್ದಲ್ಲಿ, ಮಹಾಮೇರುಪರ್ವತವು ಆವ ಪ್ರಕಾರದಲ್ಲಿ ಒಪ್ಪಿತ್ತೆಂದರೆ—ಎಲ್ಲೆಲ್ಲಿ ನೋಡಿದರೆ ಹರಿವ ಪುರುಷರಸದ ಒರತೆಗಳಿಂದಲೂ, ಎಲ್ಲೆಲ್ಲಿ ನೋಡಿದರೆ ಅಮೃತರಸಪೂರ್ಣವಾದ ಶೃಂಗಾರವಾದ ಕೊಳಂಗಳಿಂದಲೂ, ಎಲ್ಲೆಲ್ಲಿ ನೋಡಿದರೆ ರತ್ನದ ತಪ್ಪಲುಗಳಿಂದಲೂ, ಎಲ್ಲೆಲ್ಲಿ ನೋಡಿದರೆ ಕಾಮಧೇನುವಿನ ಕೊಪ್ಪಲಿಂದಲೂ, ಎಲ್ಲೆಲ್ಲಿ ನೋಡಿದರೆ ಹೊಳೆವ ಹೊನ್ನಮೃಗದ ಹಿಂಡುಗಳಿಂದಲೂ, ಎಲ್ಲೆಲ್ಲಿ ನೋಡಿದರೆ ಆಡುವ ಹಾಡುವ ನಲಿವ ನುಡಿವ ನರ್ತಿಸುವ ವಿನೋದಂಗಳಿಂದೊಪ್ಪುವ ವಿಚಿತ್ರವಾದ ಪಕ್ಷಿಗಳಿಂದಲೂ, ಅಲ್ಲಿಗಲ್ಲಿಗೆ ಕಣ್ಣಿಗೆ ಅತ್ಯಂತ ಮಂಗಳವ ಕೊಡುತಿರ್ದ ಮಹಾಮೇರುಪರ್ವತವಂ ನೋಡುತ್ತ ಶಿವನು ಬರುತ್ತಿರ್ದನು ಕಾಣಿರೈ. ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತ್ತಿರ್ದನು.

ಹರಿಗಳೈಶ್ವರ್ಯದರಮನೆ ಹರಿಯ ಹರಿಸಾಲೆ ।
ಹರಿಯ ವಾಹನಗಳಿಹ ಗೊತ್ತು ಹರಿಯಿಹ ತಾಣ ।
ಹರಿಯ ಹಗೆಗಳ ನಾಟ್ಯಶಾಲೆ ಹರಿಗಳುಕಿ ತೆರಳದ ಕತ್ತಲೆಯ ಸಾಳೆಯು ॥
ಹರಿಯ ಹರಿತಕ್ಕಂಬುಗುಡಿಸದ ತರುಗುಲ್ಮಗಳ ।
ವರಜನ್ಮವಾಸ ಹರಿಗಳ ವಿನೋದದ ಜಜ್ಜೆ ।
ಹರಿವಹರಿಯಯುವರಣ್ಯದೊಳು ಬರುತಿರ್ದ ಹರಿಯುಜನುರಸರುಗಳೊಡೆಯನು ॥

ಟೀಕು—ಕೇಳಿರೈ, ಎಲೈ ಮುನಿಗಳಿರಾ! ಆ ಮಹಾಮೇರುಪರ್ವತದ ಮುಂದುಗಡೆಯಲ್ಲಿ ತೋರುತ್ತಿರ್ದ ಅರಣ್ಯ ಆವ ಪ್ರಕಾರದಲ್ಲಿ ಒಪ್ಪಿತು? ಎಂದರೆ—ಹರಿಗಳೈಶ್ವರ್ಯದರಮನೆ= ಹರಿಗಳೆಂದರೆ ಸಿಂಹಗಳು, ಆ ಮೃಗಗಳ ಹರಿಯಾದ ಸಿಂಹಗಳ ಐಶ್ವರ್ಯವನುಂಟುಮಾಡುವ ಅರಮನೆಯು ಮರ್ಯಾದೆಯಿಂದ ಒಪ್ಪುತಿದ್ದಿತು. ಹರಿಯ ಹರಿಸಾಲೆ= ಹರಿಯೆಂದರೆ ಹಾರಿವದ ಪಕ್ಷಿ, ಅವು ಹರಿದಾಡುವ ಸಾಲೆಯು ಮರ್ಯಾದೆಯುಳ್ಳ ಒಪ್ಪುತಿದ್ದಿತು. ಹರಿಯ ವಾಹನಗಳಿಹ ಗೊತ್ತು= ಹರಿಯೆಂದರೆ ಕೃಷ್ಣನು, ಆತನಿಗೆ ವಾಹನವಾದಂಥ ಗರುಡ, ಅಂಥ ಗರುಡಪಕ್ಷಿಗಳಿಗೆ ಗೊತ್ತಾಗಿ ಒಪ್ಪುತಿದ್ದಿತು. ಹರಿಯಿಹ ತಾಣ= ಹರಿಯೆಂದರೆ ಗಿಳಿಗಳು, ಆ ಗಿಳಿಗಳು ಇಹುದಕ್ಕೆ ಸ್ಥಾನವಾದಂಥದು. ಹರಿಯ ಹಗೆಗಳ ನಾಟ್ಯಶಾಲೆ= ಹರಿಯೆಂದರೆ ಸರ್ಪ, ಆ ಸರ್ಪಕ್ಕೆ ಹಗೆಯಾದಂಥದು ನವಿಲು, ಆ ನವಿಲುಗಳು ನಾಟ್ಯವಾಡುವುದಕ್ಕೆ ರಂಗಸ್ಥಳವಾದಂಥದು. ಹರಿಗಳುಕಿ ತೆರಳದ ಕತ್ತಲೆಯ ಸಾಳೆಯು= ಹರಿಯೆಂದರೆ ಸೂರ್ಯ

ಚಂದ್ರರುಗಳ ಕಿರಣಗಳು, ಆ ಸೂರ್ಯಚಂದ್ರರುಗಳ ಕಿರಣಂಗಳಿಗೆ ತೊಲಗದೆ ಇದ್ದ ಕತ್ತಲೆಯು ಪಾಳೆಯುವನುಳ್ಳದು. ಹರಿಯು ಹರಿತಕ್ಕಿಂಬುಗುಡದ ತರುಗುಲ್ಮಗಳ ವರ ಜನ್ಮವಾಸ= ಹರಿಯೆಂದರೆ ವಾಯು, ಆ ವಾಯುವಿನ ಪರಿಹಾಟಕ್ಕೆ ತೆಱಹುಗುಡದ ಮರಗಿಡುಗಳು ಹೊದಱುಪೊಳೆಬಳ್ಳಿಗಳು ಹುಟ್ಟುವ್ರಪಕ್ಕೆ ತೌರುಮನೆಯಾದಂಥದು. ಹರಿಗಳ ವಿನೋದದ ರಕ್ಷೆ--ಹರಿಯೆಂದರೆ ಕಪಿಗಳು, ಪಲ್ಗಿಱಿದು ಪುರ್ಬಿಕ್ಕಿ ನೆಗೆದು ಬದಿಯು ಬೆಱಂಪೆ ಏಡಿಸುವ ವಿನೋದಂಗಳಿಗೆ ಱಕ್ಷೆಯುಳ್ಳಂಥದು. ಹರಿವ ಹರಿಮಯವನರಣ್ಯದೊಳು ಬರುತಿರ್ದ= ಹರಿಯೆಂದರೆ ಉದಕ, ಉದಕಮಯವಾದ ಅರಣ್ಯವ ನೋಡುತ್ತ ಬರುತಿರ್ದನು. ಹರಿಯುಜಸುರಪರುಗಳೊಡೆಯನು= ಬ್ರಹ್ಮ ವಿಷ್ಣು ದೇವೇಂದ್ರ ಮೊದಲಾದ ದೇವತೆಗಳಿಗೆ ಒಡೆಯನಾದ ಪರಮೇಶ್ವರನು ಬರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ಎರಳೆಗಳನೆಸೆ ಮೊಲಗೆಡಹು ಹುಲಿಯುಸಿಱೆ ಹಂದಿ |
ಬರುತಲಿದೆ ಬಿಡು ನಾಯ್ಗಳ ನೋಯಿಸದೆ ಮುನ್ನ |
ಹರಿದೊಡಗಿ ತಿವಿ ಹೊಯ್ದು ಕಾಳ್ಕೋಣಂಗಳಂ ಕಲ್ಲುಗಳಲಿಟ್ಟು ಮುಂದುಗೆಡಿಸಿ ||
ಭರದಿಂದಲೊಳಪೊಕ್ಕು ತರಿ ಮರೆಯ ಹಿಡಿ ಮತ್ತೆ |
ಕರಿಯ ಕಪ್ಪಿನೊಳು ಕೆಡಹೆಂದಬ್ಬರಿಪ ಬೇಡ |
ರುರವಣೆಯ ಬೇಂಟೆಗಳ ನೋಡುತ್ತ ಕಿರಾತರುದ್ರಸ್ವೈರತರುತಿರ್ದನು ||೧೯||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಶಿವನು ಅರಣ್ಯದಲ್ಲಿ ಬಹಾಗ, ಅಲ್ಲಿ ಬೇಂಟೆಯಾಡುವ ಕಿರಾತರುಗಳು ಅವ ಪ್ರಕಾರದಲ್ಲಿ ಇದ್ದರು? ಎಂದರೆ—ಎರಳೆಗಳ ಮೊಸೆಯುಂಬಿನಿಂ ಎಸೆಯೆಂಬ, ಮೊಲನ ಬಡಿಗೋಲ್ಗಳಿಂದ ಇಟ್ಟು ಕೆಡಹೆಂಬ, ಹುಲಿಯುಸಿಱಿದು ಕೊಲ್ಲೆಂಬ, ಹಂದಿ ಬರುತಲಿದೆ ನಾಯ್ಗಳ ಬಿಡು ಎಂಬ, (ನಮ್ಮ ನೋಯಿಸದ ಮುನ್ನ ಹರಿದೊಡಗಿ ತಿವಿಯೆಂಬ,) ಹೊಯ್ದು ಕಾಳ್ಕೋಣಂಗಳನು ಕಲ್ಲುಗಳಿಂದಿಟ್ಟು ಮುಂದುಗೆಡಿಸಿ ಒಳಪೊಕ್ಕು ತರಿಯೆಂಬ, ಮರದ ಮರೆಯಿಂದ † ಮದಕರಿಯು ಕಪ್ಪಿನೊಳು ಅಡ್ಡಗಟ್ಟಿ ಕೆಡಹೆಂಬ, ಈ ಪ್ರಕಾರದಲ್ಲಿ ಅಬ್ಬರಿಸುವ ಬೇಡರುಗಳ ಬೇಟೆಯು ಉರುವಣೆಯುಂ ನೋಡುತ್ತ ಕಿರಾತರುದ್ರಸ್ವೈರತರುತಿರ್ದನು. ಪೂರ್ವದಲ್ಲಿ ಅರ್ಜುನಂಗೆ ಪಾಶುಪತಾಸ್ತ್ರವಂ ಪಾಲಿಸಿದಾಗ ಕಿರಾತ ವೇಷವಂ ಹಾಕಿದ ಪರಮೇಶ್ವರನು ಈ ಕಾಂತಾರದಲ್ಲಿ ಆ ವಿನೋದವಂ ನೋಡುತ್ತ ಬರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

† ಒಳಪೊಕ್ಕು ಮರೆಯೆಂಬ ಮೃಗವನ್ನು ಹಿಡಿ ಎಂದೂ ಅರ್ಥವಾಗಬಹುದು.

ಕರೆವ ಕನ್ನಡಿಗರೆಂತಂತೆ ಕೊಯ್ಲಾಗಿರ್ದ |
ಪರಿಪರಿಯ ಧಾನ್ಯಗಳ ಹೊಲಗದ್ದೆಯೆಂತಂತೆ |
ಹಿರಿದು ಬಡವಾದವರುಗಳ ಮೊಯ್ಗಳೆಂತಂತೆ ತನ್ನ ಪುರುಷನ ವಂಚಿಸಿ ||
ಪರಪುರುಷನಂ ಕೂರ್ತು ನೆರೆವಸತಿಯೆಂತಂತೆ |
ಸುರರು ಗಂಧರ್ವರುಗಳೆಂತಂತೆ ಪರಿಪರಿಯ |
ತರುಗಳ ಪೆಸರ್ಗಳಚ್ಚರಿಯೆಂದು ನೋಡುತ್ತ ನಡೆವನಗಜಾರಮಣನು||೨೦||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಅರಣ್ಯದ ಮಧ್ಯದಲ್ಲಿ ಆವಾವ ಮರಗಳು ಒಪ್ಪಿದುವೆಂದರೆ—ಕವೀಶ್ವರನು ಮಱೆಮಾಡಿ ಜಾಣ್ಮೆಯಿಂದ ಹೇಳುತಿರ್ದಾನು. ಕರೆವ ಕನ್ನಡಿಗರೆಂತಂತೆ= ಕನ್ನಡಿಗರು ಕರೆವಾಗ "ಬನ್ನಿ" ಎಂಬರು; ಹಾಗೆ ಒಪ್ಪುವ ಬನ್ನೀಮರಗಳಿಂದ. ಕೊಯ್ಲಾಗಿರ್ದ ಪರಿಪರಿಯ ಧಾನ್ಯಗಳ ಹೊಲಗದ್ದೆಯೆಂತಂತೆ= ಕೊಯ್ಲಾಗಿರ್ದ ಹದಿನೆಂಟು ಧಾನ್ಯಂಗಳನು ಕಂಡವರು "ಬೆಳೆದ ಹೊಲ" "ಬೆಳೆದ ಗದ್ದೆ" ಎಂಬರು; ಆ ಮರ್ಯಾದೆಯಿಂದ ಒಪ್ಪುವ ಬೆಳವಲ ಮರಗಳಿಂದ. ಹಿರಿದು ಬಡವಾದವರುಗಳ ಮೊಯ್ಗಳೆಂತಂತೆ= ಬಡವಾದವರುಗಳ ಕಂಡರೆ "ಹಿರಿದು ತಾಱಿದವನು" ಎಂಬರು; ಹಾಗೆ ಒಪ್ಪುವ ತಾರೆಯ ಮರಗಳಿಂದ. ತನ್ನ ಪುರುಷನಂ ವಂಚಿಸಿ ಪರಪುರುಷನಂ ಕೂರ್ತು ನೆರೆವಸತಿಯೆಂತಂತೆ= ತನ್ನ ಪುರುಷನಂ ವಂಚಿಸಿ ಮತ್ತೊಬ್ಬನ ಸಮೀಪಕ್ಕೆ ಹೋದ ಕನ್ನೆಯ "ಪಾದರಗಿತ್ತಿ" ಎಂಬರು; ಹಾಗೆ ಒಪ್ಪುವ ಪಾದರಿ ಮರಗಳಿಂದ. ಸುರರೆಂತಂತೆ= ಆ ಮರಗಳಲ್ಲಿ ಸುರಹೊನ್ನೆ, ದೇವದಾರು ಮೊದಲಾದ ಮರಗಳಿಂದ. ಮತ್ತು ಗಂಧರ್ವರುಗಳೆಂತಂತೆ= ಪರಿಮಳಗಳೊಡನೆ, ಕೂಡಿದ ಅಗಿಲು ಶ್ರೀಗಂಧ ತದಿಕಿಲು, ಹುಲಿವಾಲ ಮೊದಲಾದ ಮರಗಳಿಂದ. ಈ ಪ್ರಕಾರವಾದ ಹೆಸರುಗಳಿಂದ ಆಶ್ಚರ್ಯದಿಂದೊಪ್ಪುವ ಮರಂಗಳಂ ನೋಡುತ್ತ, ನಡೆದನಗಜಾರಮಣನು= ಪಾರ್ವತೀಕಾಂತನಾದ ಶಿವನು ಈ ಪ್ರಕಾರವಾದ ಅರಣ್ಯವ ನೋಡುತ್ತ ಬರುತ್ತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತ್ತಿರ್ದಾನು.

ಬಡವರ ಮದುವೆಯ ಸಿಂಗರದಂತೆ ಸೌಂದರ್ಯ |
ವಡೆದು ತೋರ್ಪಂಗನೆಯುರುಗಳಂತೆ ಮುನಿಯಂತೆ |
ಕಡಿದು ಸೂತ್ರಿಸಿದ ಮರಜೊಂಬೆಯ ರುಧಿರದಂತೆ ನರರ ಜೀವಾರ್ಥದಂತೆ||
ತಡೆಯುವರುಣೋದಯದಲೆಸೆವ ತಾವರೆಯಂತೆ |
ಯೊಡಲಾಂತವುಂಡು ದಣಿವವದಂತೆ ಚಿತ್ರವೀ |
ಯಡವಿಯ ಮರಂಗಳೆಸುತೀಶ್ವರಂ ತಾಂ ತಪೋವನಕೆ ಬಿಜಯಂಗೆಯ್ದನು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಶಿವನು ಅರಣ್ಯದಲ್ಲಿ ಬರುವಾಗ ಅಲ್ಲಿರ್ದ ಮರಂಗಳು ಹೇಗೆ ಒಪ್ಪಿದುವು? ಎಂದರೆ—ಬಡವರ ಮದುವೆಯು ಸಿಂಗರ ದಂತೆ=ಬಡವರ ಮದುವೆಯು ಶೃಂಗಾರಕ್ಕೆ ಎರವೆನಿಸಿಕೊಂಬರು; ಹಾಗೆ ಒಪ್ಪುವ ಎರವದ ಮರಗಳಿಂದ. ಸೌಂದರ್ಯವಡೆದು ತೋರ್ಪಂಗನೆಯುರುಗಳಂತೆ= ಶೃಂಗಾರ ವಾದ ಸ್ತ್ರೀಯನು "ಚೆಂದವುಳ್ಳ ಚೆನ್ನೆ" ಎಂಬರು; ಹಾಗೆ ಒಪ್ಪುವ ಚನ್ನಂಗಿಚಂದ ನದ ಮರಗಳಿಂದ. ಮುನಿಯಂತೆ= ಆಶ್ರಮದಲ್ಲಿಯು ಮುನಿಗಳನು ತಪಸಿಗಳೆಂಬರು; ಹಾಗೆ ಒಪ್ಪುವ ತಪಸದ ಮರಗಳಿಂದ. ಕಡೆದು ಸೂತ್ರಿಸಿದ ಮರಬೊಂಬೆಯು ರುಧಿರ ದಂತೆ=ಕಡೆದು ಮಾಡಿದ ಮರದ ಬೊಂಬೆಯೊಳಗೆ ತುಂಬಿದ್ದ ರಕ್ತವನು ಬಕುಳ ವೆಂಬರು; ಹಾಗೆ ಒಪ್ಪುವ ಬಕುಳದ ಮರಗಳಿಂದ. ನರರ ಜೀವಾರ್ಥದಂತೆ= ಮನುಷ್ಯರು ಜೀವಿಸುವುದಕ್ಕೆ ಹೊನ್ನೇ ಪ್ರಯೋಜನ; ಹಾಗೆ ಒಪ್ಪುವ ಹೊನ್ನೆಯ ಮರಗಳಿಂದ. ತಡೆಯದರುಣೋದಯದಲೆಸೆವ ತಾವರೆಯಂತೆ= ಅರುಣೋದಯದ ಸಮಯದಲ್ಲಿ ತಾವರೆ ಅರಳುವ ಹಾಗೆ ಒಪ್ಪುವ ಅರಳಿಯ ಮರಗಳಿಂದ. ಒಡಲಾ ಱವುಂಡು ದಣಿದವರಂತೆ= ಹೊಟ್ಟೆಯು ತುಂಬುವ ಹಾಗೆ ಉಂಡು ತೇಗುವರು; ಹಾಗೆ ಒಪ್ಪುವ ತೇಗದ ಮರಗಳಿಂದ. ಈ ಮರಂಗಳಿಂದ ಒಪ್ಪುವ ಅರಣ್ಯವ ಕಂಡು ಈ ಮರಗಳ ಹೆಸರು ವಿಚಿತ್ರವಾಗಿದೆ ಎಂದು, ಈಶ್ವರನು ನೋಡುತ್ತ, ಮುಂದುಗಡೆ ಯಲ್ಲಿ ತೋಱುತಿರ್ಪ ತಪಸ್ವಿಗಳ ಆಶ್ರಮಕ್ಕೆ ಬಿಜಯಂಗೆಯ್ವನು ಕಾಣಿರೈ, ಮುನಿ ಗಳಿರಾ! ಎಂದು ಸೂತಮುನೀಶ್ವರನು ಹೇಳುತ್ತಿರ್ದಾನು.

ವೇದಶಾಸ್ತ್ರಾಗಮಪುರಾಣೇತಿಹಾಸಗಳ |
ನೋದುವ ದಶವ್ಯಾಕರಣವಿವಿಧತರ್ಕಸಂ |
ಪಾದನಂಗೈವ ಧರ್ಮಗಳ ಕರ್ಮಗಳ ಮರ್ಮಗಳ ಭೇದಗಳನಱಿವ ||
ವೈದಿಗೆಯದನವರತವಷ್ಟಾಂಗಯೋಗಮಂ |
ಸಾಧಿಸುವ ಪರತತ್ವಶಿವರಹಸ್ಯಾರ್ಥಮಂ |
ಬೋಧಿಸುವ ಋಷಿಗಳಾಶ್ರಮಮಂ ನಿರೀಕ್ಷಿಸುತ ನಡೆದನಕ್ಷಯರೂಪನು ||

ಟೀಕು—ಕೇಳಿರೈ ಎಲೆ ಮುನಿಗಳಿರಾ! ಶಿವನು ಬಹ ಆಶ್ರಮದ ದಂಡೆಯಲ್ಲಿ ಋಷಿಗಳು ಆವ ಪ್ರಕಾರದಲ್ಲಿ ಒಪ್ಪಿದರು? ಎಂದರೆ—ವೇದ= ಚತುರ್ವೇದಂಗಳ, ಪಠಿಸುವಂಥ ಋಷಿಗಳು, ಶಾಸ್ತ್ರ= ಶಬ್ದಶಾಸ್ತ್ರ, ನಾಟ್ಯಶಾಸ್ತ್ರ, ಅಲಂಕಾರಶಾಸ್ತ್ರ, ಜ್ಯೋತಿಶ್ಶಾಸ್ತ್ರ, ಧರ್ಮಶಾಸ್ತ್ರ ಮೊದಲಾದ ಶಾಸ್ತ್ರಂಗಳನೋದುವಂಥ ಋಷಿ ಗಳು, ಆಗಮ= ಕಾಮಿಕ, ಯೋಗ್ಯ, ಚಿಂತ್ಯ, ಕಿರಣ, ಮೃಗೇಂದ್ರ ಮೊದಲಾದ ವಾತುಲಾಂತ್ಯವಾದ ಆಗಮಂಗಳನೋದುವಂಥ ಋಷಿಗಳು, ಪುರಾಣ= ಬ್ರಹ್ಮ ಮೊದಲಾಗಿ ಬ್ರಹ್ಮಾಂಡ ಪುರಾಣವೇ ಕಡೆಯಾದ ಹದಿನೆಂಟು ಪುರಾಣಂಗಳನಱಿದ

ಋಷಿಗಳು, ಇತಿಹಾಸ = ಭಾರತ ರಾಮಾಯಣಗಳೆಂಬ ಇತಿಹಾಸಂಗಳನೋದುವ ಋಷಿಕುಮಾರರು; ದಶವ್ಯಾಕರಣ = ಮಹಾಭಾಷ್ಯ ರೂಪಾವತಾರ ಪಾಣಿನೀಯ ಶಾಕಟಾಯನ ಸಾರಸ್ವತ ಮೊದಲಾದ ವ್ಯಾಕರಣಂಗಳ ಪಠಿಸುವ ಋಷಿಗಳು; ತರ್ಕ = ತರ್ಕಭಾಷೆ ವರದರಾಜೀಯ್ಯ ಚಿಂತಾಮಣಿ ಮೊದಲಾದ ತರ್ಕಶಾಸ್ತ್ರಗಳ ಸಂಪಾದಿಸುವ ಋಷಿಪುತ್ರರು ಇವರುಗಳಿಂದ; ಧರ್ಮಗಳ =

ಶ್ಲೋ || "ಸತ್ಯಾಸ್ತೇಯಾರ್ಜವಾಹಿಂಸಾಃ ಶೌಚಮಿಂದ್ರಿಯನಿಗ್ರಹಃ |
ದಾನಂ ವಿದ್ಯಾ ತಪೋಜ್ಞಾನಂ ದಶಕಂ ಧರ್ಮಲಕ್ಷಣಂ ||"

ಎಂಬ ಧರ್ಮಶಾಸ್ತ್ರ ಪ್ರಮಾಣದಿಂದ ದಶವಿಧವಾದ ಧರ್ಮಂಗಳ ಹೇಳುವ ಋಷಿಗಳಿಂದ; ಕರ್ಮಗಳ ಮರ್ಮಗಳ ಭೇದಗಳನಱಿವ = ಮನೋವಾಕ್ಕಾಯ ಕರಣಂಗಳಲ್ಲಿ ನೆನೆದ ಕರ್ಮ ನುಡಿದ ಕರ್ಮ ಮಾಡಿದ ಕರ್ಮಂಗಳಿಗೆ ಈಪ್ರಕಾರವಾದ ಫಲವೆಂದು ಹೇಳುವ, ಧರ್ಮಜ್ಞರಾದ ಋಷಿಗಳಿಂದ; ಮೈದೆಗೆಯದಷ್ಟಾಂಗ ಯೋಗಮಂ ಸಾಧಿಸುವ = ಯಮನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಗಳೆಂಬ ಅಷ್ಟಾಂಗಯೋಗಮಂ ಸಾಧಿಸುತಿರ್ಪ ಋಷಿಗಳಿಂದ; ಶಿವರಹಸ್ಯಾರ್ಥಮಂ ಬೋಧಿಸುವ = ಪೃಥ್ವೀತತ್ವ ಆದಿಯಾಗಿ ಶಿವತತ್ವವೇ ಕಡೆಯಾದ ಶಿವರಹಸ್ಯವ ಬೋಧಿಸುವ ಜನರುಗಳಿಂದ—ಅಲಂಕಾರವಾದ ಆಶ್ರಮವಂ ನೋಡುತ್ತ, ನಡೆದನಕ್ಷಯರೂಪನು = ಕೇಡಿಲ್ಲದೆ ಇದ್ದ ರೂಪವನುಳ್ಳ ಶಿವನು ನಡೆತರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ಬಡಲನೆಲ್ಲವ ಸೀಡಿಯುಡಸೆ ಪುತ್ತ್ರಂ ಮೂಡೆ |
ಯಡಿಯುಗುರ್ಗಳ್ಕೈದೆ ಬೇರ್ವರಿದು ಪ್ರೊಪವಿಯುನೊಡೆದು |
ಜಡೆಗವಲುವರಿದಿಳಿದು ಬೆಳೆದು ನಿಡುಗಪ್ತ್ರದೊಳು ಪಕ್ಷಿಗಳುಗೂಡಗೆಯ್ಯೆ||
ಬಿಡದಿರಲು ಕರ್ಣಕೋಟರದೊಳೆಳಹಾವುಗಳು |
ಗಡಣದಿಂ ಪರಿವಾಡಲೇನೆಂದಜಿಯದೆ ತಪ |
ಬಿಡದೆ ಸಲೆ ಪರಮಕಾಷ್ಠೆಯೊಳಿರ್ಪಮುನಿಗಳಂ ವ್ಯಾಪಸೀಕ್ಷಿಸುತ ನಡೆದನು||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಆಶ್ರಮದಲ್ಲಿ ತಪಸ್ಸು ಮಾಡುವ ಮುನಿಗಳು ಆವ ಪ್ರಕಾರದಲ್ಲಿ ಒಪ್ಪಿದರು? ಎಂದರೆ—ಒಡಲನೆಲ್ಲವನು ಬಿಡದೆ ಬಳಸಿ ಹುತ್ತವು ಮೂಡಿ ಕೈಯುಗುರು ಅಡಿಯುಗುರುಗಳು ನೆಲಕೆ ಬೇರ್ವರಿದು ಸುತ್ತಲಾಗಿ ಜಡೆಗಳು ಕವಲುವರಿದಿಳಿದು ಬಳೆದು ಮೆಳೆಗಳಗಲಕ್ಕೆ ನಿಡಿದಾದ ಗಡ್ಡದಲ್ಲಿ ಪಕ್ಷಿಗಳು ಗೂಡನಿಕ್ಕಲಾಗಿ, ಕರ್ಣಕೋಟರದಲ್ಲಿ ಮಱಿಹಾವುಗಳು ಮನೆಯ ಮಾಡಲಾಗಿ, ಪರಮಕಾಷ್ಠೆಯಿಂದ ತಪಸ್ಸುಮಾಡುತ್ತಿರ್ಪ ಮುನಿಗಳ ಕಂಡು ಸಂತಸದಿಂದ

ನೋಡುತ್ತ ನಡೆದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಸನಕಮುನಿ ಭೃಗುವತ್ರಿ ಭರದ್ವಾಜ ಸೂತ ಜೈ |
ಮಿನಿ ಜಹ್ನು ಜಮದಗ್ನಿ ಸುಪರಾಶರ ಬ್ರಹ್ಮ |
ತನುಜ ವೇದವ್ಯಾಸ ಗಾಂಗ್ಯ ಗೌತಮ ಸನಂದನ ಪುಲೋಮ ಸುಮರೀಚಿ ||
ಮುನಿವರವಸಿಷ್ಠ ವಿಶ್ವಾಮಿತ್ರ ಮಾಂಡವ್ಯ |
ಮನುಮತಿ ದಧೀಚಿ ಮಾರ್ಕಾಂಡೇಯ ವಾಲ್ಮೀಕಿ |
ಯೆನಿಪ ತಪಸಿಗಳಾಶ್ರಮಂಗಳಲ್ಲಿ ಭಿಕ್ಷಾಟನಂಗೆಯ್ಯುತುಂ ನಡೆದನು || ೨೬ ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಶಿವನು ಸನಕ ಭೃಗು ಮೊದಲಾಗಿ ದಧೀಚಿ ವಾಲ್ಮೀಕಿ ಮಾರ್ಕಂಡೇಯರುಗಳಿದ್ದ ಎಲ್ಲಾ ಋಷಿಗಳ ಆಶ್ರಮಂಗಳನು ಹೊಕ್ಕು ಎಲ್ಲಾ ಋಷಿಗಳ ಕೆಯ್ಯ ಭಿಕ್ಷವ ಕೈಕೊಂಡು, ಅವರ ಚಿತ್ತವೃತ್ತಿಗಳನು ಆರಯ್ಯುತ ಶಿವನು ಭಿಕ್ಷಾಟನಕ್ಕೆ ನಡೆದನು ಕಾಣಿರೈ. ಎಲೈ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಕಂಗೆ ಮಂಗಳಕರವೆನಿಸಿ ಮೆರೆವ ಪಾತಾಳ |
ಗಂಗೆ ಗೋದಾವರಿ ವಿಮಲೆ ಮಲಪ್ರಹರಿ ಕೃ |
ಷ್ಣಾಂಗಿ ಗೌತಮಿ ಯಮುನೆ ಕಾವೇರಿ ಕಪ್ಪಿನಿಯೆನಿಪ ಭೀಮರಥಿ ಸರಸತಿ ||
ತುಂಗಭದ್ರೆಯಿದಾದಿಯಾಗಿ ಪೆಸರಾದ ತೀ |
ರ್ಥಂಗಳಂ ಚರಲಿಂಗವಾಗಿ ತನ್ನಯ ಶ್ರೀಪ |
ದಂಗಳಿಂ ಪಾವನಂಗೆಯ್ಯುತ್ತ ನಡೆತಂದನಾಕಾಶಗಂಗೇಶನು || ೨೭ ||

ಟೀ—ಕೇಳಿರೈ, ಎಲೆ ಮುನಿಗಳಿರಾ! ಆ ಪರಮೇಶ್ವರನು ಭಿಕ್ಷಾಟನಕ್ಕೆ ಬಹಲ್ಲಿ, ಆವ ತೀರ್ಥಂಗಳಂ ನೋಡುತ್ತ ಬಂದನು? ಎಂದರೆ—ಕಣ್ಗೆ ಮಂಗಳವಾದ ಪಾತಾಳಗಂಗೆಯುಂ ನೋಡಿ, ಗೋದಾವರಿಯುಂ ನಿರೀಕ್ಷಿಸಿ, ವಿಮಲೆಯಾದ ಮಲಪ್ರಹರಿಯುಂ ಕಂಡು, ಕೃಷ್ಣವೇಣಿಯಲ್ಲಿ ಸಂತಸಂಬಟ್ಟು, ಗೌತಮಿಯಲ್ಲಿ ನಲಿದು, [ ಯಮುನೆಯಲ್ಲಿ ಮಿಂದು, ] ಕಾವೇರಿಯುಂ ಪೊಕ್ಕು, ಕಪ್ಪಿನಿಯೊಳಿರ್ದು, ಭೀಮರಥಿಯುಂ ಮೆಟ್ಟಿ, ಸರಸ್ವತಿಯಯ್ದಿದು, ತುಂಗಭದ್ರೆಯು ಆಯ್ದು, ಕರುಣದಿಂದ ಇವು ಮೊದಲಾದ ಅಷ್ಟಷಷ್ಠಿ ತೀರ್ಥಂಗಳಂ ಚರಲಿಂಗವಾಗಿ ತನ್ನ ಶ್ರೀಪಾದದಿಂದ ಪಾವನವಂ ಮಾಡುತ್ತ, ನಡೆತಂದನಾಕಾಶಗಂಗೇಶನು = ದೇವಗಂಗೆಯನು ಮಸ್ತಕದಲ್ಲಿ ಧರಸಿದಂಥ ಮಹಾದೇವನು ಈ ಪ್ರಕಾರದಲ್ಲಿ ಬರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಶ್ರೀಶೈಲ ಹಿಮದ ಕೇತಾರವೊಪ್ಪುವ ವಾರ |
ಣಾಸಿ ಪಂಪಾಕ್ಷೇತ್ರ ಶಿವಗಂಗೆ ನಂದಿಗಿರಿ |
ಲೇಸೆನಿಪ ಭದ್ರಾದ್ರಿ ಸೇತುಬಂಧನ ಕುಂಭಕೋಣೆ ತಿರುಕಾಳಹಸ್ತಿ ||
ಭಾಸುರದ ಪೊನ್ನಾಂಬರಂ ಕಂಚಿ ಮೊದಲಾದ |
ದೇಶದೇಶದ ಮಹಾಸ್ಥಾನಂಗಳಂ ನೋಡು |
ತೀಶನಾ ತಮ್ಮ ಬೀಡಾರವೆಂದಲ್ಲಲ್ಲಿಗೆಡೆಗೆಯ್ಯುತ್ತೈತಂದನು || ೨೬ ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಪರಶಿವಮೂರ್ತಿಯು ಮೊದಲು ತಾನು ಪ್ರತ್ಯಕ್ಷವಾದ ಪುಣ್ಯಸ್ಥಾನಂಗಳಲ್ಲಿ ಇದ್ದ ಲಿಂಗಗಳಂ ನೋಡಿ, ಅಲ್ಲಿದ್ದ ಭಕ್ತರ ರಕ್ಷಿಸಬೇಕೆಂದು ಈ ಪ್ರಕಾರವಾದ ಪುಣ್ಯಕ್ಷೇತ್ರಂಗಳನು ಹೊಕ್ಕು ಬರುತಿರ್ದನು. ಅವು ಆವಾವುವೆಂದರೆ—ಮತಂಗಋಷಿಗೆ ಪ್ರತ್ಯಕ್ಷವಾದ ಶ್ರೀಶೈಲಮಂ ಪೊಕ್ಕು, ಧರ್ಮಪುತ್ರಂಗೆ ಕರುಣಿಸಿದ ಕೇತಾರದಲ್ಲಿ ಇದ್ದು, ಭಗೀರಥಂಗೆ ಪ್ರತ್ಯಕ್ಷವಾದ ವಾರಣಾಸಿಯೊಳಿರ್ದು, ಪಾರ್ವತಾದೇವಿಗೆ ಪ್ರತ್ಯಕ್ಷವಾದ ಪಂಪಾಕ್ಷೇತ್ರದಲ್ಲಿರ್ದು, ಪರಿಣಾಮಿಸಿದ ಕಣಾಧರ ಕಪಿಲಂಗೆ(?) ಪ್ರತ್ಯಕ್ಷವಾದ ಶಿವಗಂಗೆಗೆ ಬಂದು, ನಂದೀಶ್ವರಂಗೆ ಪ್ರತ್ಯಕ್ಷವಾದ ನಂದಿಗಿರಿಯು ಸೇರಿ, ವ್ಯಾಘ್ರಪಾದಂಗೆ ಪ್ರತ್ಯಕ್ಷವಾದ ಭದ್ರಾದ್ರಿಯಂ ನಿರೀಕ್ಷಿಸಿ, ರಾಮಚಂದ್ರಂಗೆ ಕರುಣಿಸಿದ ಸೇತುಬಂಧನದಲ್ಲಿ ವಿಶ್ರಮಿಸಿ, ಕುಂಭಕೋಣೆಯುಂ ಸಾರ್ದು, ಕಣ್ಣಪ್ಪಗೊಲಿದ ಕಾಳಹಸ್ತಿಯೊಳ್ ನಲಿದು, ಪತಂಜಲಿಗೆ ಒಲಿದ ಪೊನ್ನಾಂಬರದಲ್ಲಿ ನರ್ತಿಸಿ, ಸಿರಿಯಾಳಗೊಲಿದ ಕಂಚಿಯೊಳೆಡೆಗೆಯ್ದು, ಇವು ಮೊದಲಾದ ಪುಣ್ಯಸ್ಥಳಂಗಳಂ ನೋಡುತ್ತ, ಇವು ತಮ್ಮ=[ತನ್ನ ಭಕ್ತರಿರುವ] ಬೀಡಾರವೆಂದು ಅಲ್ಲಲ್ಲಿಗೆಡೆಗೆಯ್ಯುತ ಶಿವನು ಬರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ಮಾರಾರಿ ತನ್ನ ಲೀಲಾಚರಣೆಯಿಂದಿಂತು |
ಧಾರಿಣಿಯ ಮೇಲೆಸೆವ ಪುಣ್ಯತೀರ್ಥಂಗಳಂ |
ಚಾರುಶೈವಕ್ಷೇತ್ರವೆನಿಪ ಘಟಿಕಾಮಹಾಸ್ಥಾನಂಗಳಂ ನೋಡುತ ||
ಈರೆಂಟು ಯೋಜನಪರಿಪ್ರಮಾಣತೆಯ ವಿ |
ಸ್ತಾರವಿರ್ಪತ್ತೆಂಟು ಯೋಜನೋನ್ನತಿವಡೆದು |
ಸೌರಾಷ್ಟ್ರದೇಶಮಧ್ಯದಲಿ ರಾಜಿಸುವ ದ್ವಾರಾವತಿಗೆ ನಡೆತಂದನು || ೨೭ ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮಾರಾರಿ=ಕಾಮವೈರಿಯಾದ ಶಿವನು, ಲೀಲಾಚರಣೆಯಿಂದ, ಇಂತು ಭೂಮಿಯ ಮೇಲುಳ್ಳ ಪುಣ್ಯತೀರ್ಥಂಗಳನು, ಮನೋಹರವಾದ ಶಿವಕ್ಷೇತ್ರಗಳಾದ ಮಹಾಘಟಿಕಾಸ್ಥಾನಂಗಳನು ನೋಡಿ, ಆ ತದ

ನಂತರದಲ್ಲಿ ಹದಿನಾಱು ಯೋಜನ ಪ್ರಮಾಣದ ವಿಸ್ತೀರ್ಣದಿಂದ [ಒಪ್ಪುವ] ಇರ್ಪತ್ತೆಂಟು ಯೋಜನ ಪ್ರಮಾಣದ ಔನ್ನತ್ಯದಿಂದ ಒಪ್ಪುವ ಸೌರಾಷ್ಟ್ರದೇಶಮಧ್ಯದಲ್ಲಿ ಅಲಂಕಾರವಾಗಿ, ಶ್ರೀಕೃಷ್ಣನಿರುವುದಕ್ಕೆ ಆಶ್ರಯವಾದ ದ್ವಾರಾವತಿಯೆಂಬ ಪಟ್ಟಣಕ್ಕೆ ಬಂದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನ ಹೇಳುತಿರ್ದಾನು.

ಇಂತು ಪ್ರಥಮಸಂಧಿಗೆ ಜಯಮಂಗಳಂ, ಮಹಾ ಶ್ರೀ.

## — ದ್ವಿತೀಯಸಂಧಿ —

ಸೂಚನೆ :--

ದ್ವಾರಾವತಿಯ ಪೊಕ್ಕು ವಾರಾಂಗನೆಯರುಗಳ |
ಕೇರಿ ಮೊದಲಾಗಿ ಭಿಕ್ಷವ ಬೇಡುತೆಯ್ದಿ ಮನ |
ನಾರಿಯಲ್ಲಿಂದ ಶ್ರೀಕೃಷ್ಣನರಮನೆಯ [1]ನೋಡುವೆನೆಂದು ನಡೆತಂದನು[1] ||

ಟೀಕು.—ಮುಂದಣ ಸಂಧಿಯ ಕಥಾಪ್ರಸಂಗವೇನು? ಎಂದರೆ—ಶಿವನು ದ್ವಾರಾವತಿಯೆಂಬ ಪಟ್ಟಣವ ಹೊಕ್ಕು ಸೂಳೆಗೇರಿ ಮೊದಲಾದ ಕೇರಿಗಳಲ್ಲಿ ಭಿಕ್ಷವಂ ಬೇಡಿ ಅಲ್ಲಿಂದ ಶ್ರೀಕೃಷ್ಣನ ಅರಮನೆಯ ನೋಡುವುದಕ್ಕೆ ಬಂದನು, ಎಂಬುದೀ ಸಂಧಿಯ ಕಥಾಪ್ರಸಂಗವು.

ಹಿರಿಮೆಸಂಗಡ ಮಲೆಯರಸನ ಮಗಳೊಳಗೆನ್ನ |
ಸರಕುಮಾಡನೆನುತ್ತ ಗಂಗಾಭವಾನಿ ಮುನಿ |
ದಿರಲು ತೊಱೆವೆಣ್ಣಿಗೆ ಶಿವನು ಗೌರವನೆಂದು ಶಾಂಕರಿ ಮುನಿದು ನುಡಿಯೆ
ಗಿರಿಜೆ ನಾನಿನ್ನವನೆಂತ ತಲೆಯ ಮಾಣ್ಕೊಂ | [ದಿರಲು ||
ಹರಿಗೆ ಕಣ್ಣೊಱಗೆಯೊಂದೊರ್ವರಜಯುವಪ್ರೊಲೆ |
ಪರ ತಿಳುಪಿಯೊಂದೊಡಲೊಳಿರ್ದಂತಿರಾಳ್ವ ಶಂಕರನೀವುದೆಮಗೆಸುಖವಂ ||

ಟೀಕು — ಸಂಧಿಯ ಪ್ರಾರಂಭದಲ್ಲಿ ಕವೀಶ್ವರನು ಈಶ್ವರನ ಸ್ತೋತ್ರವಂ ಮಾಡುತಿರ್ದನು

ಪಾಠಾಂತರ—1. ನೋಳ್ಪ ಸಂಭ್ರಮವದೇಪೂಗಳ್ವೆನು.

ಪರಮೇಶ್ವರನು ಕೈಲಾಸದರಮನೆಯಲ್ಲಿ ತನ್ನ ತೊಡೆಯಮೇಲಿರ್ದ ಪಾರ್ವತೀದೇವಿಯ ವಾಮಕರದಿಂದಾಲಿಂಗಿಸಿ ಸವಿನೋಟದಿಂ ನೋಡಿ ಮುಗುಳ್ನಗೆವೆರಸಿ ಸರಸವಾಡುತ್ತಿರಲು, ಮಸ್ತಕದ ಮೇಲಿರ್ದ ಗಂಗೆ ಕಂಡು ಸೈರಿಸಲಾರದೆ ಶಿವನ ನೋಡಿ—ಹಿರಿದು ಸಂಗಡ ಮಲೆಯರಸನ ಮಗಳ ಮೆಚ್ಚಿ, ಎಷ್ಟು ಸರಕುಮಾಡಸೆನುತ್ತ=ಗಿರಿರಾಜನ ಮಗಳೆನ್ನದೆ ಕೋಪದಿಂದ ಮಲೆಯರಸನ ಮಗಳೆಂದು ಸವತಿಮತ್ಸರದಿಂದ [ಹೇಳಿ], "ಅವಳ ಕೂಡಿಕೊಂಡು ಸರಕುಮಾಡಸೆನ್ನನು" ಎಂದು, ಗಂಗಾಭವಾನಿ ಮುನಿಯಲಾಗಿ; ಶಿವನು ಜಟಾಮಕುಟವ ಸರಿಮಾಡಿಕೊಂಬುವ ನೆವದಿಂದ ಶಶಿಕಲೆಯ ಸರಿಯಾಗಿ ಇರಿಸುವ ಹಾಗೆ ಬಲಗೈಯಿಂದ ಗಂಗಾಂಬಿಕೆಯ ಗಲ್ಲವಿಡಿದು ಬೇಡಿಕೊಂಬುದ ಗೌರೀದೇವಿ ಕಂಡು, [ಸವತಿಮತ್ಸರದಿಂದ ಗಂಗೆಯೆಂದು ಹೇಳದೆ], ತೊಹಿನೇಣ್ಗೆ ಒಲಿದು ಗೊರವ ಕೆಟ್ಟನೆಂದು, ಶಾಂಕರಿ ಮುನಿದು ಮೊಗದಿರುಹಲಾಗಿ; ಗಿರಿಜೆ= ಎಲೆ ಪಾರ್ವತಿ, ನಾನಿನ್ನವನೆನುತ, ತಲೆಯ ಮಾಡಿಕೊಂಡವರಿಗೆ ಕಣ್ಗೋಡಿಗೆ= ತಲೆಯ ಮಾಡಿಕೊಟ್ಟ ಬಳಿಕ ಕಣ್ಗೆರಡು ಹೋದಿಗೆ, ಈ ದೇಹದೊಳಗೆ ಅರ್ಧವ ನಿನಗೆ ಕೊಟ್ಟ ಬಳಿಕ ಇನ್ನು ತಾನು ಹೋಗುಗಾಗುವುದಾವುದು? ಕೋಪ ಬೇಡೆಂದು, ಕಾಲ್ಗಳಿಗೆ ಗಲ್ಲವ ಪಿಡಿದು ಮುನಿಸ ತಿಳಿಪಿ, ಒಬ್ಬರನೊಬ್ಬರು ಅರಿಯದ ಮರ್ಯಾದೆಯಿಂದ, ಇಬ್ಬರ ಚಿತ್ತಕ್ಕೂ ಸಂತೋಷವಂ ಮಾಡಿ, ಗಂಗೆಗೌರಿಯರೆಂಬ, ಇರ್ವರು ಪೆಂಡಿರನಾಳಿದ, ಮೋಹನಮೂರ್ತಿಯಾದ, ಮಹಾದೇವನು ನಿಮಗೆ ಸಕಲೈಶ್ವರ್ಯಗಳ ಕೊಡಲಿ! ಎಂದು ಮಾಡಿದ ಆಶೀರ್ವಾದ.†

† "ಒರ್ವರರಿಯದಪ್ಪೊಲೊರ್ವರ ತಿಳಿಪಿ" ಎಂಬುದರ ಸ್ವಾರಸ್ಯವನ್ನು ಟಿಪ್ಪಣಿಕಾರನು ಆಲೋಚಿಸಿದಂತೆ ಕಂಡುಬರುವುದಿಲ್ಲ. "ಗಿರಿಜೆ ನಾನಿನ್ನವನನುತ...... ಕಣ್ಗೋಡಿಗೆಯೆಂದು" ಎಂಬ ವಾಕ್ಯವನ್ನು ಗಂಗೆಗೌರಿಯರಿಬ್ಬರಿಗೂ ಅನ್ವಯಿಸಿ, ಆ ವಾಕ್ಯಕ್ಕೆ ಗಂಗೆಯ ವಿಚಾರದಲ್ಲಿ— ಎಲೆ ಕೈಲಾಸವತಿಯಾದ ಗಂಗೆಯೇ, ತಲೆಯನ್ನೇ, ನಿನಗೆ ಮಾಡಿ ಬಿಟ್ಟರೆ ಹೇಗೋ ಹಾಗೆ, ಕೊಟ್ಟ ಬಳಿಕ ಕಣ್ ಪೋದಿಗೆ = ಅನ್ಯತ್ರ ಹೇಗೆ ಚಲಿಸುವುದು? ನಾನಿನ್ನವನೇ ಎಂಬುದಾಗಿಯೂ, ಪಾರ್ವತಿಯ ಪಕ್ಷವಾಗಿ, ಎಲೆ ಪಾರ್ವತಿ, ತಲೆಯ ಮಾಡಿಕೊಂಡರಿಗೆ ಕಣ್ಗೋಡಿಗೆ ಎಂಬ ಗಾದೆಯನು ಅರಿಯೆಯಾ? ಈ ದೇಹದಲ್ಲಿ ಅರ್ಧವನ್ನೇ ನಿನಗೆ ಕೊಟ್ಟ ಬಳಿಕ ಇನ್ನು ತಾನು ಹೋಗುಗಾಗುವುದು ಹೇಗೆ? ನಾನಿನ್ನವನೇ ಎಂಬುದಾಗಿಯೂ ಅರ್ಥಗಳನ್ನು ಮಾಡದಿದ್ದರೆ, "ಒರ್ವರರಿಯದಪ್ಪೊಲೊರ್ವರ ತಿಳಿಪಿ" (= ಪಾರ್ವತಿಗೆ ತಿಳಿಯದ ಹಾಗೆ ಗಂಗೆಗೂ, ಗಂಗೆಗೆ ತಿಳಿಯದ ಹಾಗೆ ಪಾರ್ವತಿಗೂ, ಇಬ್ಬರೂ ತಮ್ಮ ತಮ್ಮನ್ನೇ ಕುರಿತು ಈ ಸಮಾಧಾನೋಕ್ತಿಯನ್ನು ಶಿವನು ಹೇಳಿದನೆಂದು ಊಹಿಸಿಕೊಂಡು, ತಮಗೆ ತಾವೇ ಸಮಾಧಾನ ಹೊಂದುವ ಹಾಗೆ ಮಾಡಿ.) ಎಂಬ ವಾಕ್ಯದಲ್ಲಿ ಕವಿಯು ಇಟ್ಟ ಸ್ವಾರಸ್ಯವು ಹೊರಪಡಲಾರದು. "ಮಲೆಯರಸನ ಮಗಳು" "ತೊಹಿನೇಣ್" ಎಂಬುದಾಗಿ ಹೆಸರನ್ನು ಮರೆಮಾಚಿಸಿ ಹೀಯಾಳಿಸಿ ಹೇಳುವುದು ಸವತಿಯರಿಗೆ ಸಹಜವಾಗಿದೆ.

ಎಸೆದಿಹ ಸುರೇಖೆಯಿಂ ಭಾವದಿಂ ರೂಪಿ |
ನೆಸಕದಿಂ ಶೃಂಗಾರವಿಷಯದಿಂ ಕಂಗೊಳಿಪ |
ಪೊಸದೇಶಿಯಿಂದಲಂಕಾರದಿಂ ಲಕ್ಷಣೋಚಿತವಾದ ಶುದ್ಧಾಂಗದಿಂ ||
ರಸರಚನೆ ವಿಭ್ರಮ ವಿಲಾಸದಿಂದಲಿ ಕೇಳ್ದ |
ರಸಿಕರ ಹೃದಯವೆಂಬ ರಂಗಮಧ್ಯದೊಳು ನ |
ರ್ತಿಸುವ ನಚ್ಚಣಿಯಂತೆ ಶಿವನ ಭಿಕ್ಷಾಟನದ ಕೃತಿಯು ಮೋಹನವಹುದು ||

ಟೀಕು.—ಕವೀಶ್ವರನು ಕಾವ್ಯಕನ್ಯಕೆಗೂ ನರ್ತನಸ್ತ್ರೀಗು ಸಮಾನವೆಂದು ಅಭಿವರ್ಣಿಸುತ್ತಿದ್ದಾನೆ. ಎಸೆದಿಹ ಸುರೇಖೆಯಿಂದಂ = ಆ ನರ್ತನಸ್ತ್ರೀಯು ರಂಗಸ್ಥಳದಲ್ಲಿ ಸುರೇಖೆಯಿಂದ ಒಪ್ಪುವಳು; ಈ ಕಾವ್ಯವು ಲೇಸಾದ ರೇಖೆಯಿಂದ ಒಪ್ಪುತ್ತಿಹುದು. ಭಾವದಿಂ = ಆ ನೃತ್ಯಸ್ತ್ರೀಯು ಚಿತ್ತದಲ್ಲಿ ಹುಟ್ಟಲುಪಟ್ಟ ಭಾವದಿಂದ ಒಪ್ಪುವಳು; [ಈ ಕಾವ್ಯವು ಅಭಿಪ್ರಾಯದಿಂದ ಒಪ್ಪುತ್ತಿಹುದು.] ರೂಪಿನೆಸಕದಿಂ = ಆ ನೃತ್ಯಸ್ತ್ರೀಯು ಅವಯವಂಗಳ ರೂಪಿನಿಂದ ಅಲಂಕಾರವಾಗಿಹಳು; ಈ ಕಾವ್ಯವು ಸ್ತ್ರೀಯಾಕಾರವೆಂಬ ರೂಪಿನಿಂದ ಅಲಂಕಾರವಾಗಿಹುದು. ಶೃಂಗಾರವಿಷಯದಿಂ = ಆ ನೃತ್ಯಸ್ತ್ರೀಯು ಅಂಬರಶೃಂಗಾರ, ಅನುಲೇಪನಶೃಂಗಾರ, ಮಾಲ್ಯಶೃಂಗಾರ, ವಿಭೂಷಣಶೃಂಗಾರ, ಸ್ವೈಪಥ್ಯಶೃಂಗಾರಗಳಿಂದ ಒಪ್ಪುವಳು; ಈ ಕಾವ್ಯವೇ ಶೃಂಗಾರ ವಿಷಯದಿಂದ ಒಪ್ಪುವುದು. ಕಂಗೊಳಿಪ ಪೊಸದೇಶಿಯಿಂದ = ಆ ನೃತ್ಯಸ್ತ್ರೀಯು ದೇಶೀಯಪಾತ್ರದಿಂದ ಒಪ್ಪುವಳು; ಈ ಕಾವ್ಯವು ತದ್ಭವ ತತ್ಸಮ ದೇಶೀಯವೆಂಬ ಲಕ್ಷಣದಿಂದ (?) ಒಪ್ಪುವುದು. ಅಲಂಕಾರದಿಂ = ಆ ನೃತ್ಯಸ್ತ್ರೀಯು ಕಟಕ ಕೇಯೂರ ಮೊದಲಾದಲಂಕಾರದಿಂದ ಒಪ್ಪುವಳು; ಈ ಕಾವ್ಯವು ಉಪಮೆ ರೂಪಕ ಸಮಾಸ ಕ್ರಮ ಮೊದಲಾದ ಅಲಂಕಾರಗಳಿಂದ ಒಪ್ಪುವುದು. ಲಕ್ಷಣೋಚಿತಮಾದ ಶುದ್ಧಾಂಗದಿಂ = ಸುಲಕ್ಷಣಸಮೇತವಾದ ಹದಿನೆಂಟು ಲಕ್ಷಣದಿಂದ ಆ ನೃತ್ಯಸ್ತ್ರೀಯು ಒಪ್ಪುವಳು; ಈ ಕಾವ್ಯವು ಛಂದಸ್ಸುಲಕ್ಷಣದಿಂದ ಒಪ್ಪುವುದು. ರಸರಚನೆ ವಿಭ್ರಮ ವಿಲಾಸದಿಂದಲಿ = [ಆ ನೃತ್ಯಸ್ತ್ರೀಯು ಶೃಂಗಾರಾದಿ ನವರಸಗಳು ಹುಟ್ಟುವಂತೆ, ಅಭಿನಯಿಸುವಳು; ಈ ಕಾವ್ಯವು ಶೃಂಗಾರಾದಿ ನವರಸಗಳಿಂದ ಒಪ್ಪುವುದು. ಆ ನೃತ್ಯಸ್ತ್ರೀಯು ವಿಭ್ರಮವಿಲಾಸಗಳನು ತೋರಿಸುವಳು; ಈ ಕಾವ್ಯದಲ್ಲಿ ವಿಭ್ರಮವಿಲಾಸಗಳು ವರ್ಣಿತವಾಗಿರುವುವು.] ಕೇಳ್ದ ರಸಿಕರ ಹೃದಯವೆಂಬ ರಂಗಮಧ್ಯದೊಳು = ಆ ಸ್ತ್ರೀಯು ನಾಟ್ಯಮಂಟಪದ ರಂಗಮಧ್ಯದಲ್ಲಿ ಕುಣಿವಳು; ಈ ಕಾವ್ಯಕನ್ನಿಕೆಯು ಸಂಸ್ಕೃತ ಕರ್ಣಾಟಕವೆಂಬ ಉಭಯವ್ಯಾಕರಣ ಪಂಡಿತರಾದ ರಸಿಕರ ಹೃದಯವೆಂಬ ರಂಗಮಂಟಪದಲ್ಲಿ ಕುಣಿವಳು. ನಚ್ಚಣಿಯಂತೆ = ಈ ಭಿಕ್ಷಾಟನ ಚರಿತ್ರವೆಂಬ ನಚ್ಚಣಿಯು, ಕುಣಿದಾಗ ಮೋಹನವಹುದು ಎಂದು ಕವೀಶ್ವರನು ಅಭಿವರ್ಣಿಸುತ್ತಿದ್ದಾನೆ.

ಈರಾಱು ರವಿಗಳೇಕೇಂದುವಲ್ಲದೆ ಮತ್ತೆ |
ಧಾರಿಣಿಗೆ ಬೇಱೊಂದು ರವಿಶಶಿಗಳಿಲ್ಲೆಂಬ |
ಪೌರಾಣವಾಕ್ಯ ಪುಸಿಯಾದುದಿಂದಕ್ಕಟಾ ಎನಲುಮಾಧವನಿದಿರೊಳು ||
ಸೂರಿಯಶಶಾಂಕರ್ ಪಲಬರೊಪ್ಪುವಂದದಿಂ |
ಗೈರಿಕದಿ ಮುಕ್ತಾಫಲದಿ ಸಮೆದ ಕಲಶಂಗ |
ಳೋರಿಣಿಸ ಪ್ರಾಸಾದಸೌಧಹರ್ಮ್ಯಂಗಳಿಂದೆಸೆದುದಾದ್ವಾರಾವತಿ || ೩ ||

ಟೀಕು— ಕೇಳಿರೈ, ಎಲೆ ಮುನಿಗಳಿರಾ! ಶಿವನು ದ್ವಾರಾವತಿಗೆ ಭಿಕ್ಷಾಟನಕ್ಕೆ ಬಹ ಸಮಯದಲ್ಲಿ ಕಣ್ಣಿಗೆ, ಕತ್ತಲೆಯಲ್ಲಿ ಆ ಪುರದ ಮಧ್ಯದಲ್ಲಿದ್ದ ಕಲಶಂಗಳಾವ ಪ್ರಕಾರದಲ್ಲಿ ಒಪ್ಪಿದುವು? ಎಂದರೆ—ಈರಾಱು ರವಿಗಳು=ಸೂರ್ಯರು ಹನ್ನೆರಡು, ಏಕೇಂದು=ಚಂದ್ರನು ಒಬ್ಬನು, ಅಲ್ಲದೆ, ಮತ್ತೆ ಧಾರಿಣಿಗೆ ರವಿಶಶಿಗಳಿಲ್ಲೆಂಬ ಪೌರಾಣವಾಕ್ಯ = ಚಂದ್ರಸೂರ್ಯರು ಮತ್ತಿಲ್ಲವೆಂಬುವ ಪೌರಾಣವಾಕ್ಯ ಹುಸಿಯಾಯ್ತು ಅಕಟಕಟಾ, ಎಂಬ ಮರ್ಯಾದೆಯಿಂದ, ಉಮಾಕಾಂತನಾದ ಶಿವನ ಇದಿರಿನಲ್ಲಿ ಚಂದ್ರಸೂರ್ಯರು ಹಲಬರು ಬಂದು ನಿಂದರೋ ಎಂಬಹಾಗೆ, ಗೈರಿಕದಿಂ= ಸುವರ್ಣದಿಂದ ಮಾಡಲ್ಪಟ್ಟ ಕಲಶಂಗಳಿಂದಲು, ಮುಕ್ತಾಫಲದಿ= ಮುತ್ತುಗಳಿಂದ ಮಾಡಲ್ಪಟ್ಟ ಕಲಶಂಗಳಿಂದಲು, ರಮ್ಯವಾದ ದೇವತಾಭವನ ರಾಜಸದನ ಉಪ್ಪರಿಗೆಗಳಿಂದ ಆ ದ್ವಾರಕಾಪುರವು ಒಪ್ಪುತ್ತಿರಲಾಗಿ; ಶಿವನು ನೋಡುತ್ತ ನಡೆತರುತಿರ್ದನು ಕಾಣಿರೈ, ಎಲೆ ಋಷಿಗಳಿರಾ! ಎಂದು, ಸೂತಮುನೀಶ್ವರನು ಹೇಳುತಿರ್ದನು.

ಇಳೆಯ ಭೋಗಂಗಳಿಗಿದೇ ತಾಣಮೆಂಬಂತೆ |
ಬಳಸಿ ಹೊಳೆಹೊಳೆವ ಹೊಂಗೋಂಟೆ ಹೊಂಗೋಂಟೆಯಂ |
ಬಳಸಿ ಪಾತಾಳಗಾಣಿಸಿ ನೆಗಳು ನೆಲಗಾಣವಗಳು ಕೆಲಬಲಗಳಲ್ಲಿ ||
ಬಳಸಿ ಕಂಗೊಳಿಪ ಪೂಗೊಳನು ಪೂಗೊಳಗಳಂ |
ಬಳಸಿ ನಾನಾಭೂಜ ಭೂಜರಾಜಿಗಳ ತ |
ಣ್ಣೆಳಲುತ್ರಿಣಯನಮನಂಗೊಳಲುಶ್ರೀಕೃಷ್ಣನಪೊಳಲುಸೊಬಗಿಂದೆಸೆದುದು ||

ಟೀಕು— ಕೇಳಿರೈ, ಎಲೆ ಮುನಿಗಳಿರಾ! ಆ ದ್ವಾರಕಾಪುರವು ಆವ ಪ್ರಕಾರದಲ್ಲಿ ಒಪ್ಪಿತ್ತು? ಎಂದರೆ—ಇಳೆಯ ಭೋಗಂಗಳಿಗಿದೇ ತಾಣಮೆಂಬಂತೆ= ಭೂಮಿಯಲ್ಲಿರ್ದ ಭೋಗಂಗಳೆಲ್ಲಕ್ಕೂ ಇದೇಸ್ಥಾನವೆಂಬ ಮರ್ಯಾದೆಯಲ್ಲಿ, ಬಳಸಿ ಹೊಳೆಹೊಳೆವ ಸುವರ್ಣಮಯವಾದ ಅಂಬರಚುಂಬಿಯಾದ ಕೋಂಟೆಯಿಂದ, ಆ ಕೋಂಟೆಯ ಬಳಸಿ ಪಾತಾಳಾಂತವಾಗಿ ನೆಗಳು ನೆಲೆಗಾಣದಗಳಿನಿಂದ, ಆ ಅಗಳ ಬಳಸಿ ತಾವರೆ ನೈದಿಲೆಗಳಿಂದ ಅಲಂಕಾರವಾದ ಪೂಗೊಳಗಳಿಂದ, ಆ ಪೂಗೊಳಗಳ ಬಳಸಿ ಪೂತು ಪಣ್ತೊಪ್ಪುವ ಚೂತ ಪನಸ ನಾರಿಕೇಳ ದಾಳಿಂಬ ಪುನ್ನಾಗ ಪೂಗ ಮೊದಲಾದ

ವೃಕ್ಷಸಮೂಹಂಗಳಿಂದ, ದ್ವಾರಕಾಪುರದ ಬಹಿರ್ವನದ ತಂಪಾದ ನೆಳಲು, ತ್ರಿಣಯನನ ಮನಂಗೊಳಲು; ಶ್ರೀಕೃಷ್ಣನಿರುತಿರ್ದ ದ್ವಾರಾವತಿಯೆಂಬ ಪೊಳಲು ಸೊಬಗಿಂದ ಒಪ್ಪುತ್ತಿರಲಾಗಿ; ಶಿವನು ನೋಡುತ್ತ ನಡೆತರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಈಶನು ಬಹಿರ್ವನವನೀಕ್ಷಿಸುತ ಬರುತಿರ |
ಲ್ಕಾಸಮಯದಲಿ ಮುಂದೆ ವಿಜಯಜಯಮಂ ಮಾಡಿ |
ಗಾಸಿಯಾದಶ್ವಗಳ ನೀರ್ಗುಡಿಸಲಿಳಿದನೆನಲಿನನಪರಜಲಧಿಗಿಳಿಯೆ ||
ಶ್ರೀಸದಾಶಿವನೆ ಚಿತ್ತೈಸಿ ನೋಡೆಂದೆನುತ |
ವಾಸವಂ ತೋರ್ಪ ಕನ್ನಡಿಯಂತೆ ಬೆಳ್ವೆಳಗ |
ಸೂಸುತುಂ ದಿಗುಭಿತ್ತಿಯಂ ಧವಳಿಸುತ ಪೂರ್ಣಚಂದ್ರನುದಯಂಗೆಯ್ದನು ||

ಟೀ—ಕೇಳಿರೈ, ಎಲೆ ಮುನಿಗಳಿರಾ! ಈಶ್ವರನು ಆ ದ್ವಾರಕಾಪುರದ ಬಹಿರ್ವಳಯದ ಉದ್ಯಾನವ ನೋಡುತ್ತ ಬರುತ್ತಿರ್ಪಲ್ಲಿ, ಸೂರ್ಯನು ಅಸ್ತಮಿಸುವುದಕ್ಕೆ ಉದ್ಯೋಗವಾಗಿದ್ದ ಸಮಯದಲ್ಲಿ ಹೇಗೆ ಒಪ್ಪಿದನು? ಎಂದರೆ—ವಿಜಯಜಯಮಂ ಮಾಡಿ = ವಿಜಯ--ವಿ ಚಕ್ರವಾಕಪಕ್ಷಿಗಳಿಗೆ ಜಯ ಲೇಸ ಮಾಡಿ, ಜಯಮಾಡಿ—ಕತ್ತಲೆಯೆಂಬ ಹಗೆಯನು ಓಡಿಸಿ; ಗಾಸಿಯಾಗಿ ಬಂದು ಬಳಲಿದ ಕುದುರೆಗಳ ನೀರ್ಗುಡಿಸುವುದಕ್ಕೆ ಪಶ್ಚಿಮದಿಕ್ಕಿಗೆ ಇಳಿದನೋ ಎಂಬ ಮರ್ಯಾದೆಯಿಂದ ಅಸ್ತಮಿಸಲಾಗಿ—ಆ ಸಮಯದಲ್ಲಿ, ಶ್ರೀಸದಾಶಿವನೇ ಚಿತ್ತೈಸಿ ನೋಡೆಂದೆನುತ ವಾಸವಂ ತೋರ್ಪ ಕನ್ನಡಿಯಂತೆ= ಎಲೈ ಶ್ರೀಮಹಾದೇವನೇ, ನೀನು ನೋಡೆಂದು ದೇವೇಂದ್ರನು ತಂದು ತೋರುವ ಕನ್ನಡಿಯೋ ಎಂಬ ಹಾಗೆ ದಿಕ್ಕುದಿಕ್ಕಿಗೆ ಬೆಳಗ ಬೀರುತ್ತ, ಪೂರ್ವದಿಕ್ಕಿನಲ್ಲಿ ಸಂಪೂರ್ಣ ಚಂದ್ರನು ಉದಿಸಲಾಗಿ—ಚಂದ್ರೋದಯ ಸಮಯದಲ್ಲಿ ದ್ವಾರಕಾಪುರಕ್ಕೆ ಪರಮೇಶ್ವರನು ಬಂದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಅಂತಾಗಲಾಪಟ್ಟಣದ ಗೋಪುರಾಕೃತಿಯ |
ನಂತಕಾಂತಕನೊಳಪುಗುತ ಮುಂದೆ ಬರವರಲ |
ನಂತವಿಭವಂದಳೆದ ಕೇರಿಕೇರಿಯ ಬೀದಿಬೀದಿಗಳ ಪರಿರಚನೆಯ ||
ಹಂತಿಹಂತಿಯ ಭದ್ರವನಗಳನೀಕ್ಷಿಸುತ |
ಲಂತರಾಂತರದ ಮಣಿಮಾಡಗಳ ಸಾಲುಸಾ |
ಲಿಂ ತೋರ್ಕೆವಡೆದಪಣ್ಯಾಂಗನಾವೀಧಿಯೊಳುಬರುತಿರಲದೇವ್ರೊಗಳ್ವೆನು ||

ಟೀ—ಕೇಳಿರೈ, ಎಲೆ ಮುನಿಗಳಿರಾ! ಆ ಪಟ್ಟಣದ ಗೋಪುರಾಕೃತಿಯಂ =

ನಿರದೆ ಬಲಿವರು ಬಲಿದು ಸಿಕ್ಕಿದಿರಿ ನೀವಿನ್ನು |
ಮರುಳುವಿರೆ ನಮ್ಮ ಮನ್ಮಥನ ಬಾಧೆಯಲೆಂಬ ವಾರನಾರಿಯರೆಸೆದರು || ೯

ಟೀಕು — ಕೇಳಿರೈ, ಎಲೆ ಮುನಿಗಳಿರಾ! ಆ ಸೂಳೆಗೇರಿಯಲಿರುತಿರ್ದ ವಾರಾಂಗನೆಯರ ಸಾಮರ್ಥ್ಯವು ಅವ ಪ್ರಕಾರವೆಂದರೆ— ವಿರಹಾಗ್ನಿಯೆಂಬ ಕಿಚ್ಚ ಹೊತ್ತಿಸಿ, ಅದು ಉರಿವ ಮರ್ಯಾದೆಯಿಂದ ಸುಯ್ಲೆಂಬ ತಿದಿಯನೂದಿ, ಯತೀಶ್ವರರ ಅತಿ ಕರ್ಕಶವಾದ ಕರಗದೆ ಇದ್ದ ಹೃದಯವೆಂಬ ಕಬ್ಬಿಣದ ಗುಂಡನು ಕರಗುವರು; ಅದರಿಂದ ಮೋಹದ ಸಂಕಲೆಯ ಮಾಡುವರು; ಆ ಮೋಹದ ಸಂಕಲೆಯನು ಮುನಿದು ಮಲೆತಿರ್ದ ವಿಟರುಗಳ ಕಾಲ್ಗಳಿಗೆ ಹಾಕಿ, ಪ್ರಣಯಕಲಹದಿಂದ ಹುಟ್ಟಿದ ಒಲುಮೆಯ ಮೊಳೆಯನು ಆ ಸಂಕಲೆಗೆ ಬಲಿದು, "ಸಿಕ್ಕಿದಿರಿ ನೀವಿನ್ನು ಮರುಳುವಿರೆ ನಮ್ಮ ಮನ್ಮಥನ ಬಾಧೆಯಲಿ" ಎಂದು ಹೇಳುವ ವಾರನಾರಿಯರೆಸೆದರು. ಈ ಪ್ರಕಾರವಾದ ಮೋಹದ ಸಂಕಲೆಯಿಂದ ವಿಟರುಗಳ ಸರ್ವಸ್ವಾಪಹಾರ ಮಾಡುವ ವೇಶ್ಯಾಸ್ತ್ರೀಯರಂ ನೋಡುತ್ತ, ಶಿವನು ಮುಂದಕ್ಕೆ ಭಿಕ್ಷಾಟನಕ್ಕೆ ನಡೆದನು ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಮರುಳವಿಟರೆಂಬ ತಸ್ಕರರು ನೋಡಿರೆ ನಮ್ಮ |
ಮರೆಯಮಂ ಕಳಬಂದರೆಂದು ಸೆಳ್ಳುಗುರೆಂಬ |
ಸುರಗಿಯಿಂದಿರಿದು ನಳತೋಳೆಂಬ ಪಾಶದಿಂ ಕಟ್ಟಿ ಪೂಸರದಿ ಪೊಡೆದು ||
ಸಿರಿಪಚ್ಚೆ ಪುಡಿಯನಡಿಗಡಿಗೆ ಬಾಯೊಳ್ತೊಯ್ದು |
ಸ್ಮರರಾಜನಾಜ್ಞೆಯಿಂ ಬಿಡಿತಂದು ತಮ್ಮ ಕುಚ |
ಗಿರಿಯೆಂಬ ಸರಿಗೊಯ್ದು ನೂಂಕಿಯಸುಗೊಂಬ ವೇಶ್ಯೆಯರಲ್ಲಿ ಕಣ್ಗೆಸೆದರು||

ಟೀಕು — ಕೇಳಿರೈ, ಎಲೆ ಮುನಿಗಳಿರಾ! ಸೂಳೆಗೇರಿಯಲ್ಲಿ ಆವ ಪ್ರಕಾರವಾದ ವಾರಾಂಗನೆಯರಿದ್ದರೆಂದರೆ—ಯೌವನಮದದಿಂದ ಮುಂದುಗಾಣದೆ ಇದ್ದ ವಿಟರೆಂಬ ಕಳ್ಳರು ಒಳುಮಾತಿಂದ ಧನಮಂ ವಸ್ತ್ರಮಂ ಕೊಡದೆ ತಮ್ಮ ಭೋಗಿಸಿ ಹೋದಾಗಲೇ ತಮ್ಮ ಪ್ರಾಯಮೆಂಬ ಧನಮಂ ಕಳಬಂದರೆಂದು ಸಿಕ್ಕಿದ ಕಳ್ಳನ ಮುಂದಲೆಯ ಸುತ್ತಿಕೊಂಡು ಕೆಡಪಿ ಸೆಳ್ಳುಗುರೆಂಬ ಸುರಗಿಯಲ್ಲಿರಿದು ತಮ್ಮ ತೋಳೆಂಬ ಬಲುಪಾಶದಿಂದ ಬಿಗಿದು ಕಟ್ಟಿ, ಪೂಸರಗಳಿಂದ ಪೊಡೆದು, ಪಚ್ಚೆಕಪ್ಪುರದ ಪುಡಿಯ ಅಡಿಗಡಿಗೆ ಬಾಯೊಳ್ತೊಯ್ದು, ಕಾಮರಾಯನಾಜ್ಞೆಯಿಂದ ಹಿಡಿದು ತಂದು, ತಮ್ಮ ಕುಚಂಗಳೆಂಬ ಗಿರಿಯ ಸರಿಯೊಳ್ ನೂಂಕಿ ಇತ್ತತ್ತ ಚಲಿಸಲೀಸದೆ ಪ್ರಾಣಾಪಹಾರ ಮಾಡುವ ವೇಶ್ಯೆಯರಂ ನೋಡುತ ಸರ್ವೇಶ್ವರನು ಭಿಕ್ಷಕ್ಕೆ ನಡದನು ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಕಂಗಳೆಂದೆಂಬ ಬಲೆಗಳ ಪಸರದಿಂ ಕಟಾ |
ಕ್ಷಂಗಳೆಂದೆಂಬ ನಿಡುಬಾಣಂಗಳಿಂ ಭ್ರೂಯು |
ಗಂಗಳೆಂದೆಂಬ ಬಲುಬಿಲ್ಗಳಿಂ ಪೊಳೆವಸೊಗಳೆಂದೆಂಬ ಬಡಿಕೋಲ್ಗಳಿಂ ||
ಹಿಂಗವೆಳನಗೆಗಳೆಂದೆಂಬ ತೆಱೆಯಿಂ ವೈರಿ |
ಕಂಗಳೆಂದೆಂಬ ನಾನಾಪದಿರಿಸಿಂ ವಿಟಜ |
ನಂಗಳೆಂದೆಂಬ ನರಮೃಗ ಬೇಂಟೆಯಾಡುವ ವರಾಂಗನೆಯರೆಸೆದಿರ್ದರು ||೧೧

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ವೇಶ್ಯಾವೀಥಿಯಲ್ಲಿ ಸೂಳೆಯರು ಬೇಂಟೆಕಾಱರ ಹಾಗೆ ಒಪ್ಪುತಿರ್ದರು. ಅದು ಹೇಗೆಂದರೆ—ವಿಟರುಗಳ ವಶೀಕರಣ ಮಾಡುವ ಕಣ್ಣುಗಳೆಂದೆಂಬ ಬಲೆಗಳಿಂದ, ಕಡೆಗಣ್ಣ ನೋಟವೆಂಬ ಕೂರಿತ್ತಾದ ಎದೆ ತಾಕುವ ಅಂಬಿನಿಂದ, ಹುಬ್ಬುಗಳೆಂಬ ದೊಡ್ಡಿತ್ತಾದ ಬಿಲ್ಲುಗಳಿಂದ, ಹಣೆಯೆಂಬ ಬಡಿಕೋಲ್ಗಳಿಂದ, ನಾನಾಪ್ರಕಾರವಾದ ಒಱುವಾತಿನುಪಚಾರದ ಮಱೆಮಾತನಾಡುವ ಹದಿರುಗಳಿಂದ, ವಿಟಜನರೆಂಬ ನರಮೃಗಂಗಳ ನೋಟದಿಂದ ಕೆಲಬರ, ಕಡೆಗಣ್ಣ ನೋಟದಿಂದ ಕೆಲಬರ, ಹುಬ್ಬುಹಾಕಿ ಕೆಲಬರ, ಏಕಾಂತವಾಗಿ ಕೆಲಬರ, ಎಳೆನಗೆಯಿಂದ ಕೆಲಬರ, ಸವಿನುಡಿಯಿಂದ ಕೆಲಬರ, ತನ್ನೊಳಗು ಮಾಡಿಕೊಂಡು ಈ ಪ್ರಕಾರದಲ್ಲಿ ಬೇಂಟೆಯಾಡುತ್ತಿರ್ದರು—ಎಂಬುದು ಈ ಪದದ ತಾತ್ಪರ್ಯ. ಈ ಪ್ರಕಾರವಾದ ಸತಿಯರ ನೋಡುತ್ತ ಶಿವನು ನಡೆತರುತಿರ್ದನು ಕಾಣಿರೈ ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ಹರನನರೆವೆಣ್ಮಾಡಿ ತಲೆವಾಗಿಸಿದೆವು ಮುರ |
ಹರನೆದೆಯ ಮೆಟ್ಟಿ ನಾಟ್ಯವನಾಡಿದೆವು ಸುರಾ |
ಸುರರೆಲ್ಲರಿಗೆ ಪಿತಾಮಹನೆಂದು ಮೆಱೆವ ಬ್ರಹ್ಮನ ಬಾಯ ಮುದ್ರಿಸಿದೆವು ||
ಸುರಪನಂಗದಲಿ ತಮ್ಮಯ ಡಾಗನೊತ್ತಿದೆವು |
ಧರೆಯೊಳಿನ್ನುಳಿದ ಮಾನವರೆಮ್ಮ ಪೊತ್ತಸಕೆ |
ಸರಿಯೆಯೆಂದೆಂಬ ಬಿರುದಿನ ವಾರನಾರಿಯರು ಪುರದಲ್ಲಿ ಕಣ್ಗೆಸೆದರು ||೧೨||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಸೂಳೆಗೇರಿಯಲ್ಲಿ ಮತ್ತಾವ ಪ್ರಕಾರವಾದ ಸ್ತ್ರೀಯರಿದ್ದರು? ಎಂದರೆ—ಜಗತ್ಸಂಹಾರಕನಾದ ಹರನನು ಅರ್ಧಪುರುಷ ಅರ್ಧಸ್ತ್ರೀ ಮಾಡಿ ಅರ್ಧನಾರೀಶ್ವರನೆಂಬ ಹೆಸರನು ಮೆಱೆಸಿದೆವು; ಮುರನೆಂಬ ರಾಕ್ಷಸನ ಕೊಂದು ಅಧಟನಾದ ನಾರಾಯಣನ ಎದೆಯನು ಲಕ್ಷ್ಮೀಚರಣದಿಂದ ಮೆಟ್ಟಿ ನಾಟ್ಯವಾಡಿದೆವು; ದೇವತೆಗಳಿಗೆ ರಾಕ್ಷಸರಿಗೆ ಪಿತಾಮಹನೆಂದು ಹೆಚ್ಚಿದ ಬ್ರಹ್ಮನ ಬಾಯಲ್ಲಿ ಮುಖದಲ್ಲಿ ಸರಸ್ವತಿಯ ನೆಲಸಿ ಬಾಯಿಗೆ ಮುದ್ರೆಯ ಹಾಕಿಸಿ

ಲಲ್ಲಿ ಅನಂತಶಯನನಾದ ನಾರಾಯಣನ, ಚೆಲುವಿಕೆಯಿಂದ ರತಿಪತಿಯಾದ ಕಾಮನ, ಅಡಿಗಡಿಗೆ ತಲೆದೂಗಿಸುವರು. ಎಂದರೆ—ಆ ಬ್ರಹ್ಮನ ಸರಸ್ವತಿಗಿಂತಲೂ ಜಾಣ್ಮೆಯುಳ್ಳವರೆಂದು ತಲೆದೂಗಿಸುವರು; ಆ ಇಂದ್ರನ ಐರಾವತಕ್ಕಿಂತಲೂ ಮಂದಗಮನವುಳ್ಳವರು ಎಂದು ಮೆಚ್ಚಿಸುವರು; ಆ ಶ್ರೀಕೃಷ್ಣನ ಲಕ್ಷ್ಮೀದೇವಿಗಿಂತಲೂ ವೈಭವವನುಳ್ಳವರು ಎಂದು ಬೆಱಗಾಗಿಸುವರು; ಆ ಕಾಮನ ರತೀದೇವಿಗಿಂತಲೂ ರೂಪಾತಿಶಯವನುಳ್ಳವರೆಂದು ಸೋಲಿಸುವರು. ಈ ಪ್ರಕಾರವಾದ ಸವಿನುಡಿಯಿಂದ ಮೆಲ್ನಡೆಯಿಂದ ವೈಭವದಿಂದ ರೂಪಾತಿಶಯದಿಂದ ಒಪ್ಪುವ ವೇಶ್ಯಾಸ್ತ್ರೀಯರ ನೋಡುತ್ತಾ ಶಿವನು ನಡೆತರುತಿರ್ದನು ಕಾಣಿರೈ.

ಎರಡು ತಾವರೆ ತಾವರೆಯ ಮೇಲೆರಡು ಬಾಳೆ |
ಯೆರಡುಬಾಳೆಯ ಮೇಲೆರಡು ಮಳಲ ದಿಣ್ಣೆ ಮಳ |
ಲೆರಡು ದಿಣ್ಣೆಯ ಮೇಲೆ ಗಗನ ಗಗನದ ಮೇಲೆರಡು ಕಲಶವವಱ ಮೇಲೆ ||
ಪರಿಪೂರ್ಣಶಶಿ ಶಶಿಯ ಮೇಲೆ ಮಧುಕರಗಳೀ |
ತರುಣಿಯರುಗಳ ಮೆಯ್ಯ ಮೇಲೆ ಪುಟ್ಟಿದುವಿವ |
ಚ್ಚರಿಯಬ್ಜಭವಸೃಷ್ಟಿಯೊಳಗೆನಲು ವಾರವನಿತೆಯರಲ್ಲಿ ಕಣ್ಗೆಸೆವರು ||೧೩||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ವೇಶ್ಯಾವೀಧಿಯಲ್ಲಿ ವಾರಾಂಗನೆಯರು ಮತ್ತಾವ ಪ್ರಕಾರದಲ್ಲಿ ಒಪ್ಪಿದರು? ಎಂದರೆ— ಕವೀಶ್ವರನು ಹೇಳುತ್ತಿರ್ದಾನು. ಎರಡು ತಾವರೆ, ಆ ತಾವರೆಯ ಮೇಲೆರಡು ಬಾಳೆ = ಜಗತ್ತಿನಲ್ಲಿ ತಾವರೆಯ ಪುಷ್ಪಂಗಳಾದರೆ ಅವಱ ಮೇಲೆ ಬಾಳೆಗಳಿಲ್ಲ; ಸ್ತ್ರೀಯರ ಪದಕಮಲಂಗಳೆಂಬ ಎರಡು ತಾವರೆ, ಅವಱ ಮೇಲೆ ನುಣ್ಣಾದ ಹೊಱಮೆಯಿಲ್ಲದ ತೊಡೆಗಳೆಂಬ ಬಾಳೆಗಳೊಪ್ಪುತಿರ್ದುವು. ಆ ಯೆರಡು ಬಾಳೆಯ ಮೇಲೆರಡು ಮಳಲದಿಣ್ಣೆ= ಭೂಮಿಯ ಮೇಲೆ ಬಾಳೆಯಿಹುದಲ್ಲದೆ, ಆ ಬಾಳೆಯಮೇಲೆ ಮಳಲದಿಣ್ಣೆಯಿಲ್ಲ. ಈ ಸ್ತ್ರೀಯರಲ್ಲಿ ನುಣ್ದೊಡೆಗಳೆಂಬ ಬಾಳೆಯ ಕಂಭಗಳ ಮೇಲೆ ನಿತಂಬಗಳೆಂಬ ಮಳಲದಿಣ್ಣೆಗಳೊಪ್ಪುತ್ತಿರ್ದುವು. ಆ ಮಳಲ ದಿಣ್ಣೆಯಮೇಲೆ ಗಗನ= ಈ ಸ್ತ್ರೀಯರಲ್ಲಿ ಮಧ್ಯಶೂನ್ಯವೆನಿಸಿಕೊಂಬುದು. ಆ ಗಗನದ ಮೇಲೆರಡು ಕಲಶ= ಉಪ್ಪರಿಗೆಯ ಮೇಲೆ ದೇವಾಲಯದ ಮೇಲೆ ಕಳಶವಿರ್ಪುವಲ್ಲದೆ ಆಕಾಶದ ಮೇಲೆ ಇಲ್ಲ; ಈ ಸ್ತ್ರೀಯರ [1]ನಡುವೆಂಬ[1] ಆಕಾಶದ ಮೇಲೆ ಕುಚಗಳೆಂಬ ಕಳಶಂಗಳೊಪ್ಪಿದುವು. ಅವಱ ಮೇಲೆ ಪರಿಪೂರ್ಣ ಶಶಿ= ಆ ಚಂದ್ರನು ಪೂರ್ವಾಚಲದಲ್ಲಿ ಒಪ್ಪುವನಲ್ಲದೆ ಕಳಶಾಗ್ರದಲ್ಲಿಲ್ಲ; ಈ ಸ್ತ್ರೀಯರಲ್ಲಿ ಕುಚಗಳೆಂಬ ಕಳಶಗಳ ಮೇಲೆ ಮುಖವೆಂಬ ಪೂರ್ಣ

---

ಪಾ—1. ಮಧ್ಯೇ ಶೂನ್ಯವೆನಿಸಿಕೊಂಬ.

ಚಂದ್ರನು ಒಪ್ಪುತಿದ್ದಾನು. ಆ ಶಶಿಯಮೇಲೆ ಮಧುಕರಗಳ್= ತುಂಬಿಗಳು ತಾವರೆಯಲ್ಲಿ ಇಹುವಲ್ಲದೆ ಚಂದ್ರನಲ್ಲಿ ಇಲ್ಲ; ಈ ಸ್ತ್ರೀಯರುಗಳ ಮುಖವೆಂಬ ಚಂದ್ರನಲ್ಲಿ ಕುರುಳುಗಳೆಂಬ ತುಂಬಿಗಳೊಪ್ಪುತ್ತಿದ್ದುವು. ಈ ತರುಣಿಯರ ಮೆಯ್ಯ ಮೇಲೆ ಈ ರೀತಿ ಹುಟ್ಟಿದುದು ಆಶ್ಚರ್ಯವಲ್ಲವೆ, ಎಂಬ ಮರ್ಯಾದೆಯಿಂದ ಒಪ್ಪುವ ವಾರಾಂಗನೆಯರಂ ನೋಡುತ್ತ ಶಿವನು ಭಿಕ್ಷಕ್ಕೆ ನಡೆದನು ಕಾಣಿರೈ, ಎಂದು ಹೇಳುತ್ತಿದರ್ಾನು.

ಯೋಗಿಗಳ್ಗೆ ಹಿಮಂ ಸುರತತಾಂತರ್ಗೆ ಶಿಶಿರಋತು |
ಭೋಗಿಜನರಿಗೆ ವಸಂತಂ ವಿಯೋಗಿಗಳಿಗೆ ನಿ |
ದಾಘಸಮಯಂ ಜಾರೆಯರಿಗೆ ವರ್ಷಾಗಮಂ ಪರಿಣಾಮಿಜೀವಿಗಳ್ಗೆ ||
ರಾಗವಮಾಡುವ ಶರತ್ಕಾಲವೆನೆ ಷಡ್ಋತುವ |
ನಾಗಳೇಪೋಲ್ತು ಮೆಱೆವಚ್ಚ ಬೆಳ್ದಿಂಗಳೊಳು |
ಭಾಗೀರಥೀಧರಂ ಭಿಕ್ಷಮಂ ಬೇಡುತುಂ ಬರೆ ಮುಂದೇಂ ಪೊಗಳ್ವೆನು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಶಿವನು ಚಂದ್ರೋದಯದಲ್ಲಿ ಭಿಕ್ಷಮಂ ಬೇಡುತ್ತ ಬರುತಿರ್ಪಲ್ಲಿ, ಆ ಬೆಳುದಿಂಗಳು ಆವ ಪ್ರಕಾರದಲ್ಲಿ ಒಪ್ಪಿತು? ಎಂದರೆ—ಯೋಗಿಗಳ್ಗೆ ಹಿಮಂ= ಸ್ತ್ರೀಪುರುಷ ಸಂಯೋಗದಿಂದಿಹ ಸುಖಿಗಳ್ಗೆ ಆಲಿಂಗನವ ಬಿಡದೆ ಇರುವುದಱಿಂದ ಹಿಮಂತಋತುವಿನ ಹಾಗೆ ಇದ್ದಿತು; ಸುರತತಾಂತರ್ಗೆ ಶಿಶಿರಋತು= ಸುರತದಿಂದ ಬಾಡಿ ಬೆವರನಾಱಿಸಿಕೊಂಬ ಸತಿಪುರುಷರ್ಗೆ ಶೈತ್ಯಮಾಡುವುದಱಿಂದ ಶಿಶಿರಋತುವಿನ ಹಾಗಿದ್ದಿತು; ಭೋಗಿಜನರಿಗೆ ವಸಂತಂ= ಶ್ರೀಗಂಧ, ಪಚ್ಚೆಕರ್ಪೂರ, ಪನ್ನೀರು, ಕುಂಕುಮ, ಕಸ್ತೂರಿ, ಮುಡಿಹೂವು—ಇವನ್ನು ಭೋಗಿಸಿ ಸತಿಯರೊಳು ಚೆಲ್ಲವಾಡುವರ್ಗೆ ವಸಂತಋತುವಿನ ಹಾಗಿದ್ದಿತು; ವಿಯೋಗಿಗಳ್ಗೆ ನಿದಾಘಸಮಯಂ= ಅಗಲಿದ ಸತಿಪುರುಷರ್ಗೆ ವಿರಹಾಗ್ನಿ ಪುಟ್ಟಿಸುವುದಱಿಂದ ಗ್ರೀಷ್ಮಋತುವಿನಹಾಗೆ ಇದ್ದಿತು; ಜಾರೆಯರ್ಗೆ ವರ್ಷಾಗಮಂ= ಒಂದಿಷ್ಟು ಬಡವಾದವನಾಡುವ ಜಾರೆಯರಿಗೆ ಮಳೆಗಾಲದಲ್ಲಿ ಮನೆಬಾಗಿಲ ಬಿಟ್ಟು ಹೊಱಡದೆ ಇರುವಹಾಗೆ ಈ ಬೆಳದಿಂಗಳೊಳು ಬಾಗಿಲ ಬಿಟ್ಟು ಹೊಱವಂಟರೆ ಆರಾದರೂ ಕಂಡಾರು ಎಂಬ ಭೀತಿಯನು ಹುಟ್ಟಿಸುವುದಱಿಂದ ಮಳೆಗಾಲದ ಮರ್ಯಾದೆಯಲ್ಲಿ ಇದ್ದಿತು; ಪರಿಣಾಮಿಜೀವಿಗಳ್ಗೆ ರಾಗವಮಾಡುವ ಶರತ್ಕಾಲವೆನೆ= ಶರತ್ಕಾಲದಲ್ಲಿ ಹೊಲ ಗದ್ದೆ ಹೊಂದಲಾದವಱಲ್ಲಿ ಹದಿನೆಂಟು ಧಾನ್ಯಗಳು ಬೆಳೆದು ಬಿತ್ತಿದವರಿಗೂ ಸಂತೋಷಮಾಡುವುದು, ಸುಮ್ಮನೆ ನೋಡಿದವರಿಗೂ ಸಂತೋಷ ಮಾಡುವುದು, ಆ ಮರ್ಯಾದೆಯಲ್ಲಿ ಸರ್ವರಿಗೂ ಸಂತೋಷ ಮಾಡುವುದಱಿಂದ ಶರದೃತುವಿನ ಹಾಗೆ ಇದ್ದಿತು. ಈ ಪ್ರಕಾರದಿಂ ಷಡ್ಋತುಗಳನು ಪೋಲ್ತು ಮೆಱೆವ ಅಚ್ಚ ಬೆಳ್ದಿಂ

ಗಳೊಳಗೆ ಭಾಗೀರಥಿಯಂ ಮಸ್ತಕದಲ್ಲಿ ಧರಿಸಿದ ಶಿವನು ಭಿಕ್ಷಮಂ ಬೇಡುತ ಮುಂದಕ್ಕೆ ನಡೆದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಹೇಳುತಿರ್ದಾನು.

ಮೆಯ್ಯೊಲವು ಪೊಂಬಳ್ಳಿಯುಂದವಮಂ ಪಳಿಯುಲಂ |
ಗೆಯ್ಯಲತಿಗೆಯ ಕೆಂಪುಮಂ ಕೀಳ್ಪಡಿಸಲು ಸರ |
ಗೆಯ್ಯಲದು ಕೋಕಿಲಾಪಮಂ ಸೋಲಿಸಲು ಸೊಬಗುವಿಟರಿಗೆ ಮದನನಾ ||
ಪುಯ್ಯಲಂತಿರಲು ಚಂಪಕಕೆಣೆಯ ನಾಸಿಕದ |
ಸುಯ್ಯೆಲರ್ಪರಿಮಳಿಸುತಿರಲು ನೋಳ್ಪರ ಮನದ |
ನುಯ್ಯಲಾಡಿಸಿದಳೆಂದೆನಲು ಮಣಿಯಸೋಜು ನವಿಲುಯ್ಯಲಾಡಿದಳೊರ್ವಳು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಶಿವನು ಭಿಕ್ಷಕ್ಕೆ ಬರುತ್ತಿರ್ಪಲ್ಲಿ ಒಬ್ಬ ಸ್ತ್ರೀಯು ಉಯ್ಯಲೆಯಾಡುತ್ತಿರ್ದಳು. ಆವ ಪ್ರಕಾರದಲ್ಲಿ ಆಡಿದಳು? ಎಂದರೆ—ಅವಳ ತನುಲತೆಯು ಸುವರ್ಣದ ಬಳ್ಳಿಯ ಹಳಿಯುತ್ತಿರಲಾಗಿ, ಅಂಗೆಯ್ಯ ಕೆಂಪು ಅಲತಿಗೆಯ ಕೆಂಪ ಕೀಳ್ಪಡಿಸಲಾಗಿ, ಅವಳ ಸ್ವರವು ಕೋಕಿಲಾಪಮಂ ಸೋಲಿಸಲಾಗಿ, ಸಂಪಗೆಯ ಪುಷ್ಪಕ್ಕೆ ಸಮಾನವಾದ ನಾಸಿಕದ ಸುಯ್ಯಲುಗಾಳಿ ಪರಿಮಳವ ಸೂಸುತ್ತಿರಲಾಗಿ, ನೋಡುವರ ಮನವನು ಉಯ್ಯಲೆಯನಾಡುತ್ತಿದ್ದಾಳೋ ಎಂಬ ಹಾಗೆ ಮಣಿಯುಸ್ಲೇಜು ನವಿಲುಯ್ಯಲೆಯನಾಡುವ ವಿಲಾಸಿನಿಯಂ ನೋಡುತ್ತ ಶಿವನು ಭಿಕ್ಷಕ್ಕೆ ನಡೆದನು ಎಂದು ಸೂತಮುನೀಶ್ವರನು ಹೇಳುತ್ತಿರ್ದಾನು.

ಮತ್ತಲ್ಲಿಯೊರ್ವಳಭವಂಗೆ ಭಿಕ್ಷಾಶನವ |
ನಿತ್ತಿಯಿಂ ತಂದು ನೀಡಲು ಪಾತ್ರೆಯಂ ಮೇಲ |
ಕೆತ್ತೆ ಮೇಲುದು ಜಾರೆ ನಸುನಗುತ ಪೊಸಮೊಲೆಗಳಂಗಂಬರಾಂಚಲವನು ||
ಪತ್ತಿಸುವ ಪರನ ಜಾಣ್ಮೆಗೆ ಮೆಚ್ಚಿ ತಲೆದೂಗೆ |
ಚಿತ್ತಜಾಂತಕನವಳ ಭಾವಮಂ ನೋಡಿ ಮೆ |
ಚ್ಚುತ್ತೆ ವರಪಸಿತಮುಖನಾಗಿ ಭಿಕ್ಷಾಯೆಸುತೆ ಮುಂದಕ್ಕೆ ನಡೆತಂದನು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತೊಂದು ಸ್ಥಾನದಲ್ಲಿ ಒಬ್ಬ ಸ್ತ್ರೀಯು ಶಿವಂಗೆರಡು ಹಸ್ತದಿಂ ಭಿಕ್ಷಮಂ ನೀಡಲಾಗಿ, ಶಿವನು ಭಿಕ್ಷಾಪಾತ್ರೆಯ ಮೇಲಕ್ಕೆ ನೆಗಹಿದರೆ, ಆ ಸ್ತ್ರೀಯು ಕೈಗಳನೆತ್ತಿ ಭಿಕ್ಷಮಂ ನೀಡುವಲ್ಲಿಯುಂ ಮೊಲೆಯ ಮೇಲಣ ಮೇಲುದು ಜಾರಿಲಾಗಿ, ಆ ಮೊಲೆಗಳಿಗೆ ಅಭವನು ಕೈಸೋಕುವ ಮರ್ಯಾದೆಯಿಂದ ಮುಸುಕಲಾಗಿ, ಶಿವನ ಜಾಣ್ಮೆಗೆ ಮೆಚ್ಚಿ ತಲೆದೂಗಲಾಗಿ ಶಿವನು ಅವಳ ಭಾವಕ್ಕೆ ಸಂತೋಷಪಡುತ್ತ, ಮುಗುಳು ನಗೆಯಂ ನಗುತ್ತ, ಮುಂದಕ್ಕೆ ಭಿಕ್ಷಮಂ ಬೇಡುತ್ತ ನಡೆದನು.

ಮೃಡಗೆ ಕೈಗಾಣ್ಕೆಗುಡುವೊಲ್ ಭಿಕ್ಷಮಂ ನೀಡಿ |
ಪೊಡೆಮಡುತೆ ತೋರಮುಡಿಭಾರವಿದ ಪೊಱುವೆನೆಂ |
ಬೊಡೆ ಕೊರಳು ಸಣ್ಣನೀಗುವೆ ಕುಚಗಳೆಂಬ ಗಿರಿಗಳ ಭಾರಮಂ ಪೊಱು
ನಡು ಸಣ್ಣ ಘನಜಘನಭಾರಮಂ ಪೊಱುವೆನೆಂ | [ವೊಡೆ ||
ಬೊಡೆ ಪದಗಳಿವು ಸಣ್ಣನೆಂದು ತನ್ನಯ ಬಾಳು |
ಬಡತನವನರಿದಿರಾಗಿ ಬಿನ್ನೈಸುವಂತೆ ತೋರ್ಪ ಮಡದಿ ನಿಂದಿರ್ದಳು || ೨೧ ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಪರಶಿವನು ಭಿಕ್ಷಕ್ಕೆ ಬರುತ್ತಿರ್ದಲ್ಲಿ ಒಬ್ಬ ಸೌಂದರ್ಯವುಳ್ಳ ಸತಿ ಬಂದು, ಮೃಡಗೆ ಕೈಗಾಣ್ಕೆ...ಮುಡುತ = ರಕ್ಷಣಕರ್ತನಾದ ಶಿವನಿಗೆ ಕೈಗಾಣಿಕೆಯು ಕೊಡುವ ಮರ್ಯಾದೆಯಿಂದ. ಪಂಚಭಕ್ಷ್ಯಪಾಯಸದ ಭಿಕ್ಷವಂ ನೀಡಿ, ಶರಣೆಂದು (ಹೇಳಿ), "ಎಲೈ ಸ್ವಾಮಿಾ! ತೋರವಾದ ಮುಡಿಯ ಭಾರವ ಹೊಱುವುದಕ್ಕೆ ಕೊರಳು ಸಣ್ಣ; ಈ ಕುಚಗಳೆಂಬ ಗಿರಿಗಳ ಹೊಱುವುದಕ್ಕೆ ನಡು ಬಲುಸಣ್ಣ; ದೊಡ್ಡಿತ್ತಾದ ನಿತಂಬಗಳ ಭಾರವ ತಾಳುವುದಕ್ಕೆ ಕಣಕಾಲ್ಗಳು ಸಣ್ಣ; ತನ್ನ ಬದುಕು ಹೀಗಾಯಿತು. ಎಲೆ ದೇವ! ನೀನು ನೋಡಬೇಕು" ಎಂದು ತನ್ನ ದೊಡ್ಡಿತ್ತಾಗಿ ಇರ್ದಂಥ ಬಾಳನು, ಸಣ್ಣನಾಗಿದ್ದ ಬಡತನವನು, ಒಡೆಯನ ಕಂಡರೆ ಬಿನ್ನಯಿಸುತಿರ್ದಳೋ ಎಂಬ ಮರ್ಯಾದೆಯಿಂದ ನಿಂದಿರ್ದ ಸತಿಯು ನೋಡುತ್ತ, ಶಿವನು ಮುಂದಕ್ಕೆ ನಡೆದನು.

ದೇಶಂಗಳಱಿಯೆ ನಿನ್ನ ಕಣ್ಗಳೀರಾಱು |
ರಾಶಿಗಳೊಳೊಂದು ರಾಶಿಯು ನೆಲೆಮೊಲೆಗಳೊಂದು |
ರಾಶಿಯನು ನಿನ್ನ ತನುವಿನೊಳು ಕಾಣಿಸದೆ ಕಾಣಿಸುವ ತನುಮಧ್ಯವೊಂದು ||
ರಾಶಿಯನು ನಿನ್ನ ಭ್ರೂಲತೆಯೊಂದು ರಾಶಿಯನು |
ನೀ ನಡುತಲೊಂದು ರಾಶಿಯ ಪೋಲ್ವೆಯೆಂದೊರ್ವ |
ವೇಶಿ ಮಗಳಂ ಪೊಗಳುವುದ ಕೇಳಿ ನಸುನಗುತ ರಾಶಿಗನುಂ ನಡೆದನು ||

ಟೀಕು— ಕೇಳಿರೈ, ಎಲೆ ಮುನಿಗಳಿರಾ! ಆ ವೇಶ್ಯಾವೀಧಿಯಲ್ಲಿ ಮುಂದುಗಡೆಯಲೊಬ್ಬ ವೃದ್ಧೆ ಮಗಳ ಕೊಂಡಾಡುತಿರ್ದಳು. ಅದೆಂತೆಂದರೆ—ಎಲೆ ಮಗಳೆ, ದೇಶದವರಱಿದ ಮರ್ಯಾದೆಯಿಂದ ನಿನ್ನ ಕಣ್ಣುಗಳು ಹನ್ನೆರಡುರಾಶಿಗಳೊಳೊಂದು ರಾಶಿಯು ಪೋಲ್ತುವು. ಅದು ಹೇಗೆಂದರೆ, ಹನ್ನೆರಡು ರಾಶಿಗಳೊಳಗೆ ಮಿಾನರಾಶಿಯೊಂದು, ಈ ನಿನ್ನ ಕಣ್ಗಳು ಮಿಾನುಗಳಿಗೆ ಸಮಾನವೆಂದರ್ಥ. ನಿನ್ನ ನೆಲೆಮೊಲೆಗಳು ಒಂದು ರಾಶಿಯನು ಪೋಲ್ತುವು = ಕುಂಭರಾಶಿಗೆ ಸಮಾನವಾಗಿ ಒಪ್ಪು

ಅಡಗಿಕೊಂಡಿರಲಾಗಿ: ನಾಯಕನು ಭೋಂಕನೆ ಒಳಪೊಕ್ಕು ಬಂದು ಮಲಗುವ ಮಂಚದ ಮೇಲೆ ನಾಯಿಕೆ ಇಲ್ಲದೆ ಶೂನ್ಯವಾಗಿ ಇರಲಾಗಿ; ಸಂದೇಹವಾದ ಮನಸ್ಸಿನಿಂದ ಪ್ರಾಣ ನಡುನೆತ್ತಿಗೆ ಏರುತ್ತಿರಲಾಗಿ; ನಾಯಿಕೆ ಹೆದರಿ ತನ್ನ ಕಾಣದೆ ಇದ್ದರೆ ಪ್ರಾಣವ ಬಿಡುವನೋ ಎಂದು ಮೆಲ್ಲನೆ ಕಂಕಣಧ್ವನಿಯಂ ತೋರಲಾಗಿ; ವಿಟಂಗೆ ಸಂತೋಷವಾಗೆ; ತನ್ನ ಚಲವನು ಮರೆದು ಬಾಗ್ಯದಿಂದ ಕೂಡಿ ಸುಖಿಸುತಿರ್ದ ಸತಿಪುರುಷರಂ ನೋಡುತ್ತ, ಶಿವನು ಮುಂದಕ್ಕೆ ನಡೆದನು, ಎಂದು ಸೂತ ಮುನೀಶ್ವರನು ಹೇಳುತ್ತಿರ್ದನು.

ಉಟ್ಟುಡಿಗೆ ತೊಡಿಗೆಯಲಿ ಸಿಂಗರಕೆ ಸೊಗಸಾಗಿ |
ಯಿಟ್ಟ ನೊಸಲಿನ ಕತ್ತೂರಿಯ ತಿಲಕದಿಂದಲಳ್ |
ವಟ್ಟ ಕರ್ಣದ ಕನಕಪತ್ರಂಗಳಿಂದ ವರಶುಕ್ರೋಪಮಾನವೆನಿಪ ||
ಬಟ್ಟಮುತ್ತಿನ ನಾಸಿಕಾಭರಣದಿಂದ ಮುದ |
ಕಟ್ಟಿಂದಲೊರ್ದಳೆಸ್ಸೆರಸಿದಿರೊಳಿರಲು ನಲ್ |
ನಿಟ್ಟಿಸರ ಮನಸಿಗೊಂದೇ ತುತ್ತೆನಿಸಿ ತೋರುತಾನೀಯುವೆನಿಪ ಮೊಗದ ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತಾ ಸೂಳೆಗೇರಿಯಲ್ಲಿ ಒಬ್ಬ ಸೌಂದರ್ಯವನುಳ್ಳ ಸ್ತ್ರೀಯು ಉಟ್ಟ (ದಿವ್ಯಾಂಬರದಿಂದ,) ತೊಟ್ಟ ದಿವ್ಯಾಭರಣದಿಂದ, ನೊಸಲಲ್ಲಿ ಹೊಳೆವ ಕತ್ತುರಿಯ ತಿಲಕದಿಂದ, ಕಿವಿಯೊಳೊಪ್ಪುವ ರತ್ನಖಚಿತವಾದ ಸುವರ್ಣ ಕರ್ಣಪತ್ರದಿಂದ, (ನಾಸಿಕದಲ್ಲಿ ಒಪ್ಪುವ) ಶುಕ್ರನಿಗೆ ಸಮಾನವಾದ ದೊಡ್ಡಮುತ್ತಿನ ಮೂಗುತಿಯಿಂದ, ಒಪ್ಪವಾಗಿ ಕಟ್ಟಿದ ತುರುಬಿನಿಂದ, ಅಲಂಕಾರವಾಗಿ ಒಪ್ಪುತ್ತಿರಲಾಗಿ; ನಿಟ್ಟಿಸರ ಮನಸಿಗೆ = ಇವಳ ನೋಡಿದ ರಸಿಕರ ಕಣ್ಣಿಗೆ, ಒಂದೇ ತುತ್ತೆನಿಸಿ ತೋರುತಾನೀಯುವೆನಿಪ ಮೊಗದ = ಇವಳ ಮುಖದಲ್ಲಿ ಒಪ್ಪುತ್ತಿದ್ದ ಅಧರಾಮೃತದ ಒಂದು ತುತ್ತ ಸವಿದರೆ ಸಾಲದೇ—ಎಂದೆನಿಸಿಕೊಂಬ ಮುಖವನುಳ್ಳ ನೀರೆಯ ನೋಡುತ್ತ ಶಿವನು ಮುಂದಕ್ಕೆ ನಡೆದನು.

ವಿಮಾನಕೇತನಪುರದ ಮೋಹನಾಕಾರವದ |
ನೇನೆಂಬೆ ಪತ್ತ್ಯದು ಮನೆಯ ನಾರಿಯರು ಪರ |
ಮಾನಂದದಿಂದ ಭಿಕ್ಷವನೀಡಲೆಂದು ನಡೆತಂದು ಮನನೋತು ನಿಂದು ||
ನೀನೆ ಬೆತ್ತಲೆ ನಿನ್ನ ನೆನೆವ ಭಕ್ತರ ಭವಂ |
ತಾನೆ ಬೆತ್ತಲೆ ನಿನ್ನ ಕಂಡೆಮ್ಮ ಚಿತ್ತದ |
ಜ್ಞಾನ ಬೆತ್ತಲೆಯಾಯಿತೆಂಬಂತುಡಿಗೆ ಜಾರ್ದು ತಾನೆ ಬೆತ್ತಲೆಯಾದರು ||

ಟೀಕು—ಕೇಳಿನ್ನೈ, ಎಲೆ ಮುನಿಗಳಿರಾ! ಮೀನಕೇತನಹರನ ಮೋಹನಾಕಾರವದನೇನೆಂಬೆ = ಕಾಮಸಂಹಾರಿಯಾದ ಪರಮೇಶ್ವರನ ಮೋಹನಸ್ವರೂಪವನ್ನು ಏನೆನ್ನಬಹುದು. ಹತ್ತೈದು ಮನೆಯ ನಾರಿಯರೆಲ್ಲರು ಒಗ್ಗಾಗಿ ಪರಮಾನ್ನವನು ಶಿವಗೆ ಭಿಕ್ಷವನೀಡಲೆಂದು ಬಂದು, ಶಿವನ ಸ್ವರೂಪವನು ಕಂಡು ಮನಸೋತು, ನಿರಿ ಸಡಿಲಲಾಗಿ, ಹೇಗಿದ್ದರು? ಎಂದರೆ—ಎಲೆ ದೇವ! ನೀನೆ ಬೆತ್ತಲೆ = ದಿಗಂಬರನಾದ ದೆಸೆಯಿಂದ ನೀನು ಬೆತ್ತಲೆ. ನಿನ್ನ ನೆನೆವ ಭಕ್ತರ ಭವಂ ಬೆತ್ತಲೆ = ನಿನ್ನ ಭಕ್ತರಿಗೆ ಭವವಿಲ್ಲವಾದಕಾರಣದಿಂದ ಭಕ್ತರಭವವು ಬೆತ್ತಲೆ, ನಿನ್ನ ಕಂಡೆಮ್ಮ ಚಿತ್ತದಜ್ಞಾನ ಬೆತ್ತಲೆ = ನಿನ್ನ ಕಂಡ ಮಾತ್ರದಲ್ಲಿ ನಮ್ಮ ಚಿತ್ತದ ಅಜ್ಞಾನವು ಬೆತ್ತಲೆಯಾಯಿತೆಂದು ನುಡಿದು,—ಉಡಿಗೆ ಜಗುಳ್ದು ಬೆತ್ತಲೆಯಾದ ಸ್ತ್ರೀಯರುಗಳಂ ನೋಡುತ್ತ ಶಿವನು ನಗುತ್ತ ನಿರ್ವಿಕಾರದಲ್ಲಿ ಮುಂದಕ್ಕೆ ನಡೆದನು.

ಶಶಿರೇಖೆ ಸಾಹಿತ್ಯವಾಣಿ ಕರ್ಪೂರಗಂಧಿ |
ಕುಸುಮಾಂಗಿ ಕುಶಲೆ ಕೋಮಲೆ ಸುವಿದ್ಯಾರಾಗೆ |
ರಸಭರಿತೆ ರಾಗಕೋಗಿಲೆ ರಾಜಲಕ್ಷ್ಮಿ ರತಿರೂಪೆ ಶೃಂಗಾರಹಾರೆ ||
ಅಸಮೆಯಭಿನವಭೋಗಿ ರಾಗಿ ಸರಸತ್ಯಾಗಿ |
ನಿತಾವತಂಸೆಯೆಂದೆನಿಪ ಪೆಸರ್ವಡೆದ ಸ್ತ್ರೀ |
ಳೆಸೆದಿರ್ದರೀಶ್ವರನ ಮುಂದೆ ಭಿತ್ತಿಯಲಿ ಚಿತ್ರಿಸಿದ ಪುತ್ತಳಿಗಳಂತೆ || ೭೮ ||

ಟೀಕು—ಕೇಳಿನ್ನೈ, ಎಲೆ ಮುನಿಗಳಿರಾ! ಆ ಕೇರಿಯಲ್ಲಿ ಆವಾವ ಹೆಸರನುಳ್ಳ ಸ್ತ್ರೀಯರುಗಳಿದ್ದರು? ಎಂದರೆ—ಶಶಿರೇಖೆಯೋಪಾದಿಯಲ್ಲಿ ಕಾಂತಿಯನುಳ್ಳ ಶಶಿರೇಖೆಯೆಂಬವಳು, ರಸೋಕ್ತವಾದ ನುಡಿಯ ನುಡಿವ ಸಾಹಿತ್ಯವಾಣಿಯೆಂಬವಳು, ಕರ್ಪೂರದೋಪಾದಿಯಲ್ಲಿ ಉಸಿರ್ಗಂಪನುಳ್ಳ ಕರ್ಪೂರಗಂಧಿಯೆಂಬವಳು, ಪುಷ್ಪದೋಪಾದಿಯಲ್ಲಿ ಮೃದುವಾದ ಶರೀರವನುಳ್ಳ ಕುಸುಮಾಂಗಿಯೆಂಬವಳು, ವಿದ್ಯಾಕುಶಲಂಗಳ ಬಲ್ಲ ಕುಶಲೆಯೆಂಬವಳು, ತನ್ನ ಸೊಬಗಿನಿಂದ ಮೆರೆವ ಕೋಮಲೆಯೆಂಬವಳು, ಸಂಗೀತ ಸಾಹಿತ್ಯಗಳ ಬಲ್ಲ ವಿದ್ಯಾರಾಗೆಯೆಂಬವಳು, ನವರಸಂಗಳ ಬಲ್ಲ ರಸಭರಿತೆಯೆಂಬವಳು, ಸುಸ್ವರದಿಂದ ಮೆರೆವ ರಾಗಕೋಗಿಲೆಯೆಂಬವಳು, ಅಷ್ಟಭೋಗದಿಂ ಮೆರೆವ ರಾಜಲಕ್ಷ್ಮಿಯೆಂಬವಳು, ರತಿದೇವಿಗೆ ಸಮಾನವಾದ ರೂಪುಳ್ಳ ರತಿರೂಪೆಯೆಂಬವಳು, ನವರತ್ನಹಾರಂಗಳನುಳ್ಳ ಶೃಂಗಾರಹಾರೆಯೆಂಬವಳು, ತನಗೆ ಸರಿಯಾರೆಂದಿರುವ ಅಸಮೆಯೆಂಬವಳು, ದಿನದಿನಕ್ಕೆ ಹೊಸತಾದ ವಸ್ತುಗಳ ಭೋಗಿಸುವ ಅಭಿನವಭೋಗಿಯೆಂಬವಳು, ಸರ್ವರಲ್ಲಿ ಪ್ರೇಮವುಳ್ಳ ರಾಗಿಯೆಂಬವಳು, ವಿನೋದದಿಂದ ಬೇಡಿದ ವಸ್ತುಗಳ ಕುಡುವ ಸರಸತ್ಯಾಗಿಯೆಂ

ಬವಳು, (ರಸಿಕರ ಕೂಡ ವಿನೋದವಾಗಿ ಮಾತಾಡಿ ಅವರನ್ನು ವಶಮಾಡಿಕೊಳ್ಳ ಬಲ್ಲ) ರಸಿಕಾವತಂಸೆಯೆಂಬವಳು—(ಈರೀತಿಯಾದ) ಹೆಸರುಗಳನುಳ್ಳ ಸ್ತ್ರೀಯ ರುಗಳು, ಶಿವನಿಗೆ ಭಿಕ್ಷವ ನೀಡಿದರು. ಚಿತ್ರದ ಬೊಂಬೆಗಳಂತೆ ನಿಂದಿರ್ದ (ಇಂಥ) ಸ್ತ್ರೀಯರಂ ನೋಡುತ್ತ ಶಿವನು ಮುಂದಕ್ಕೆ ನಡೆದನು, ಕಾಣಿರೈ ಎಲೆ ಮುನಿ ಗಳಿರಾ! ಎಂದು ಸೂತಮುನೀಶ್ವರನು ಹೇಳುತ್ತಿರ್ದಾನು.

ಎಂದು ನವಿಸ್ಮಾಪುರಕೆ ಬಾರದಭವಂ ಬಂದ |
ನೆಂದು ಭಿಕ್ಷವನೀಡಲೆಂದು ಮಂದನೆಯರಾಡ |
ಲೆಂದು ರೂಪಂ ನೋಡಲೆಂದು ವರವಂ ಬೇಡಲೆಂದು ಮಾತಾಡಲೆಂದು ||
ಪೊಂದೊಡಿಗೆಯು ತೋಱಲೆಂದು ಸೊಬಗಂ ಬೀಱ |
ಲೆಂದು ಬಸವಂ ಸಾರಲೆಂದು ಕಾಮಗೆ ದೂಱ |
ಲೆಂದು ಕಾಮುಕಿಯರ್ಕೈತಂದು ಬೀದಿಯು ನಡುವೆ ನಿಂದು ಬೆಱಗಾಗಿರ್ದರು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಸೂಳೆಗೇರಿಯಲ್ಲಿ ಶಿವನು ಬರು ತ್ತಿರಲಾಗಿ ಅಲ್ಲಿಯ ಸ್ತ್ರೀಯರುಗಳಲ್ಲಿ, ಎಂದೂ ನವಿಸ್ಮಾಪುರಕೆ ಬಾರದಭವಂ ಬಂದ ನೆಂದು ನೋಡಲೆಂದು ಬಂದ ಸತಿಯರು ಕೆಲಬರು, ಭಿಕ್ಷವ ನೀಡಲೆಂದು ಬಂದ ಭಕ್ತೆ ಯರು ಕೆಲಬರು, ಮಾತಾಡಲೆಂದು ಬಂದ ಮಾನಿನಿಯರು ಕೆಲಬರು, ರೂಪಂ ನೋ ಡಲೆಂದು ಬಂದು ನಿಂದ ಸೌಂದರಿಯರು ಕೆಲಬರು, ವರವ ಬೇಡಲು ಬಂದ ಪುತ್ರಾ ರ್ಥಿಗಳು ಕೆಲಬರು, ಹೊಂದೊಡಿಗೆಯು ತೋಱಲೆಂದು ಬಂದ ನೀಱೆಯರು ಕೆಲಬರು, ಸೊಬಗು ಬೀಱಲೆಂದು ಬಂದ ಬಿಂಕಗಾತಿಯರು ಕೆಲಬರು, ಬಸವಂ ಸಾರಲೆಂದು ಬಂದ ಘನಕುಚೆಯರು ಕೆಲಬರು, ಕಾಮಗೆ ದೂಱಲೆಂದು ಬಂದ ಕಾಮುಕಿಯರು ಕೆಲಬರು—ಐತಂದು ಬೀದಿಯಲ್ಲಿ ನಿಂದು ಬೆಱಗುವಟ್ಟು ನೋಡುತ್ತಿರಲು; ಕೋಟಿ ಕಂದರ್ಪರೂಪವನು ಧರಿಸಿದ ಮಹಾದೇವನು ನೋಡುತ್ತ ಮುಂದಕ್ಕೆ ನಡೆದನು.

ಹರನೆ ನಿಂ ಕರುಣೆಯೆಂಬರಮೇಕೆ ಬಱಿದೆ ಹರ |
ಪುರುಷಾರ್ಥಿಯುವ ಕಾಮನು ಲೋಕನಾಗ್ನಿಯಿಂ |
ಮರಿಸಿಪೆಯೆನಲ ತರುಣಿ ನಾನಲ್ಲವಿನ್ನುವೆಂತೆನೆ ನಿನ್ನ ನೋಡಿ ಭ್ರಮಿಸಿ ||
ಮರವೊಳಗಣಗ್ನಿ ಮರನು ಸುಟ್ಟುವೊಲ್ ತನ್ನ |
ವಿರಹಾಗ್ನಿ ತನ್ನನೇ ಸುಡಲುರಿದು ಪೋದನೀ |
ಧರೆಯೊಳಿನ್ನವನೆಂತೆ ಬಟ್ಟಬಯಲಸವಾದ ಬಾಮನೆನುತಣಿಯಿಟ್ಟನು |

ಟೀಕು :-ಕೇಳಿರೈ, ಎಲೆ ಮುನಿಗಳಿರಾ! ಆ ಸೂಳೆಗೇರಿಯಲ್ಲಿ ಒಬ್ಬ ಸ್ತ್ರೀಯು ಶಿವನೊಡನೆ ನುಡಿಯುತ್ತಿರ್ದಳು. ಹರನೆ = ಪಾಪಹರನಾದ ದೇವನೇ, ನಿನ್ನ ಕರುಣೆ = ಕರುಣವುಳ್ಳವನು ಎಂದು ಒಲಿದು ನುಡಿವರು. ಪರಪುರುಷಾರ್ಥಿಯಾದ ಕಾಮನ ನೊಸಲ ಕಣ್ಣ ಕಿಚ್ಚಿನಿಂದ ಏಕೆ ಉರುಹಿದೆ? ಎನಲಾಗಿ; "ನಾನಲ್ಲ, ನೀನು ರಿಹಿದೆ?" ಎಂದರೆ, ಅದೆಂತೆನಲು; "ನಿನ್ನ ನೋಡಿ ಭ್ರಮಿಸಿ, ಮರದೊಳಗಣ ಅಗ್ನಿ ಮರನ ಸುಟ್ಟಹಾಗೆ ತನ್ನ ವಿರಹಾಗ್ನಿಯಿಂದ ತಾನೇ ಉರಿದು ಹೋದನು; ನನಗೆ ಈ ಧರೆಯಲ್ಲಿ ಬಟ್ಟಬಯಲ ಅಪವಾದ ಬಂದಿತು"—ಎಂದು ಅವಳನೇ ರೂಪಾತಿಶಯವನುಳ್ಳವಳ ಮಾಡಿ ನಸುನಗೆಯಿಂದ ನಕ್ಕು, ವಿನೋದಚರಿತ್ರನು ಮುಂದಕ್ಕೆ ನಡೆದನು.

ವಿಧಿವಶದ ವಿಜಾಯುಬಾರದು ನಿನ್ನ ತಲೆಯನೇ |
ಱಿದೊಡಂ ಕಳಂಕ ಬಿಡದಾಯ್ತು ಚಂದ್ರಂಗೆನಲ್ |
ಸುವತಿಯುಪುದಲ್ಲವೇ ಹರಿಯುದಿಯನೇಱಿದೊಡೆಯಾದಲ್ಲದೇ ಬ್ರಹ್ಮನ ||
ವದನಮಂ ಸೇರಿದೊಡೆ ಶಿವನ ಮುಂಡೆಯ ತುಟ್ಟ |
ತುದಿಯನೇಱಿದೊಡೆ ಬಿಡದಾಯಿತ್ತು ನಿಮ್ಮ ಹೃದ |
ಯದ ಕಳಂಕೆಂಬಾಗ ಚಂದ್ರನೊಬ್ಬನೆ ಪಾಪನೆನುತ ಮುಂದಕೆ ನಡೆದನು ||

ಟೀಕು— ಕೇಳಿರೈ, ಎಲೆ ಮುನಿಗಳಿರಾ! ಮತ್ತಾಸೂಳೆಗೇರಿಯಲ್ಲಿ ಒಬ್ಬ ಸ್ತ್ರೀಯು ಶಿವನೊಡನೆ ನುಡಿಯುತ್ತಿರ್ದಳು. "ಎಲೆ ಮಹಾದೇವ? ವಿಧಿವಶದ ವಿಜಾಯಬಾರದು = ಬ್ರಹ್ಮಲಿಖಿತದ ವಿಜಾಯಿಪೆನೆಂದರೆ, ಆರಿಗೂ ಆಗುವುದಿಲ್ಲ. ದೇವೋತ್ತಮನಾದ ನಿನ್ನ ತಲೆಯನೇಱಿದರೂ ಚಂದ್ರನ ಕಳಂಕ ಬಿಡದೆ ಹೋಯಿತು" ಎಂದು ಬರ್ಜ ಸತಿ ನುಡಿಯಲಾಗಿ; "ಎಲೆ ಸ್ತ್ರೀಯೇ, ಅಹುದಹುದು. ಹರಿಯುದಿಯನೇಱಿದೊಡೆಯು = ವಿಷ್ಣುವಿನ ಹೃದಯವನೇ ಮನೆಯಮಾಡಿಕೊಂಡಿದ್ದರೂ, ಬ್ರಹ್ಮನ ಮುಖದಲ್ಲಿ ಇದ್ದರೂ, ಶಿವನ ಮಂಡೆಯ ತುದಿಯನೇಱಿಕೊಂಡಿದ್ದರೂ. ನಿಮ್ಮ ಹೃದಯದ ಕಳಂಕ ಈಗ ಬಿಟ್ಟೀತೆ! ಆ ಚಂದ್ರನೊಬ್ಬನ ಪಾಪ ಪಾಪವೇ!" ಎನುತ ಕಟಕಿಯನಾಡುತ್ತ, ನಮ್ಮ ಹೊರ್ದಿದವರಲ್ಲಿ ಗುಣದೋಷಂಗಳನಱಿಸುವುದಿಲ್ಲೆನುತ ಶಿವನು ಮುಂದಕ್ಕೆ ನಡೆದನು.

ಮಹಿಯೊಳೆಲೆ ಪರಶಿವನೆ ನೀನಾದಿಮಧ್ಯಾಂತ |
ರಹಿತನೆಂಬರು ತವಿಯಂತ್ಯವಿಲ್ಲದೆ ಮಧ್ಯ |
ವಿಹುವ ನಿನ್ನೊಳು ಕಂಡೆವಿದು ಚಿತ್ರವಹುದಲ್ಲವೋ ಪೇಳು ನೀನೆಂದೆನೆ ||

ಅಹುದಬಲೆ ನಿನ್ನೊಳಾದ್ಯಂತವಿರ್ದುಂ ಮಧ್ಯ |
ವೆಹಗೆ ನೋಡಿಪೊಡಿಲ್ಲದಿಹುದು ಮಹಾಚಿತ್ರ |
ವಹುದಲ್ಲವೋ ಪೇಳು ನೀನೆಂದು ಪ್ರಾರ್ಥಿಗುತ್ತರವೀಯುತಡಿಯಿಟ್ಟನು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ವೇಶ್ಯಾವೀಧಿಯಲ್ಲಿ ಮತ್ತೊಬ್ಬ ಕೋಮಲೆ ನುಡಿಯುತ್ತಿರ್ದಳು. ಭೂಮಿಯಲ್ಲಿ ಆರಿಂದಲೂ ಅಳುವುದಕ್ಕೆ ಅಸಾಧ್ಯವಾದ ಪರಶಿವಮೂರ್ತಿಯೇ, ನಿನ್ನನು ಆದಿಮಧ್ಯಾಂತರಹಿತನೆಂಬರು; ಆದ್ಯಂತವಿಲ್ಲದೆ ಮಧ್ಯವಿಹುದ ನಿನ್ನಲ್ಲಿ ಕಂಡೆವು: ಇದು ಚಿತ್ರವಹುದು; ಅದು ಹೇಗೆಂದರೆ— ಆದಿಯಲ್ಲಿ ನೀನು ಹುಟ್ಟುವುದ ಕಂಡುದಿಲ್ಲ, ಅಂತ್ಯದಲ್ಲಿ ನೀನಳಿವುದ ಕಂಡವರಿಲ್ಲ, ಆದಿಯೂ ಇಲ್ಲದೆ ಅಂತ್ಯವೂ ಇಲ್ಲದೆ ನಡುವೆ ತೋರುವ ಆಕಾರವನು ಕಂಡುದು ಆಶ್ಚರ್ಯವಲ್ಲವೆ? ಎನಲಾಗಿ—ಶಿವನು, ಎಲೆ ಸ್ತ್ರೀಯೇ, ನಿನ್ನಲ್ಲಿ ಆದಿಯಾದ ಪಾದಂಗಳು ಕಾಣಬರುತ್ತಿದ್ದಾವು, ಅಂತ್ಯವಾದ ಶಿರಸ್ಸು ಕಾಣಬರುತ್ತಿದ್ದೀತು, ಮಧ್ಯವಾದ ನಿನ್ನ ನಡುವು ಕಾಣಬರದೇ ಇಹುದು: ಇದು ಚಿತ್ರವಲ್ಲವೆ?-ಎಂದು ಆ ಸ್ತ್ರೀಯು ಶೃಂಗಾರವನಭಿವರ್ಣಿಸುತ್ತ, ಉತ್ತರವಂ ಕೊಟ್ಟು, ಆದ್ಯಂತಸ್ಥಾನವಿಲ್ಲದ ಮಹಾದೇವನು ಮುಂದಕ್ಕೆ ನಡೆದನು.

ಎಲೆ ಶಿವನೆ ಸಕಲವೇದಾಗಮಂಗಳು ನಿನ್ನ |
ನೆಲೆಗಾಣವೆಂಬುವಹುದೆಂಬರದಹುದು |
ನೆಲೆಗಾಣದಿರಲಣೋರಣೀಯಾನ್ ಮಹತೋಮಹೀಯಾನೆಂದುವೇಕೆಂದವೆ ||
ಲಲನೆಯೆನ್ನುವನೆಂದುದಿಲ್ಲ ನೀನೆನ್ನಂತೆ |
ನಲು ನಿನ್ನನಿಯ ನಡುವನುರುಜಘನವುಂ ಕಾಣು |
ನಲಿಯಣೋರಣೀಯಾನ್ ಮಹತೋಮಹೀಯಾನೆಂದುವೆಂದು ಮುಂದಕೆ
[ ನಡೆದನು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತಾ ಸೂಳೆಗೇರಿಯಲ್ಲಿ ಒಬ್ಬ ಕಾಮಿನಿ ನುಡಿಯುತ್ತಿರ್ದಳು. ಎಲೆ ಶಿವನೆ, ಸಕಲವೇದಾಗಮಂಗಳು ನಿನ್ನ ನೆಲೆಗಾಣವೆಂಬವರು—ಅಹುದಹುದು, ಹಾಗೆ ನೆಲೆಯ ಕಾಣದಿದ್ದರೆ ಅಣೋರಣೀಯಾನ್ ಮಹತೋಮಹೀಯಾನು ಎಂದು ಅಣುವಿಂಗೆ ಅಣುವಾದ ಮಹತ್ತಿಂಗೆ ಮಹತ್ತಾದ ರೂಪವುಳ್ಳವನು ಎಂದು ವೇದಂಗಳೇತಕ್ಕೆ ಎಂದುವು? ಎನಲಾಗಿ—ಎಲೆ ಲಲನೆ, ಎನ್ನನು ಎಂದುದಿಲ್ಲ, ನಿನ್ನ ತನುವನು ಎಂದೆನಲು, ಅದು ಹೇಗೆಂದರೆ—ಅಣುವಿಂಗೆ ಅಣುವಾಗಿ

ಅಣುವಾಗಿ ನಿನ್ನ ನಡುವು ಕಾಣಿಸದು. ಮಹತ್ತಿಗೆ ಮಹತ್ತಾಗಿ ನಿನ್ನ ಜಘನಂಗಳು ದೊಡ್ಡವಾಗಿ ಇರಲಾಗಿ, ಅಣೋರಣೀಯಾನ್ ಮಹತೋಮಹೀಯಾನೆಂದೂ ನಿನ್ನನೆ ಕೊಂಡಾಡಿದುವು—ಎಂದು ಮುಗುಳುನಗೆಯಿಂದ ಮೂದೇವರಾಣ್ಮನು ಮುಂದಕ್ಕೆ ನಡೆದನು.

ಬಳಿಕ ಮುಂದೊಂದೆಡೆಯೊಳೊರ್ವಳೀಶ್ವರನ ಕಂ |
ಗೊಳಿಪ ಚೆಲುವಿಕೆಯ ನಡೆ ನೋಡಿಯುಂತಸ್ತಾಪ |
ವೊಳೆಯಲಾಗೇಹಿನೆಯುವಸ್ಥೆ ಬಲಿವಂಗವುನ್ನಡರಲು ಗೃಹಾಂಗಣದೊಳು ||
ತೊಳಪ ಬೆಳತಿಗೆಯ ಬೆಳುದಿಂಗಳನುರಿವ ಶಿಖಿಯ |
ಬೆಳಗೆಂದು ಬಗೆದು [1]ಮನೆ[1]ಗಿಚ್ಚ ಸಂದಿಪೆನೆಂದು |
ಕಳವಳಿಸಿ ಬಯಲ ಶೀತಳವಾರಿಯೆಂದು ಪೊಗೆಪೊಗೆದು ಸೂಸುತಲಿರ್ದಳು ||

ಟೀಕು—ಕೇಳಿರೈ, ಬಳಿಕ ಮುಂದೆ ಮತ್ತೊಂದು ಠಾವಿನಲ್ಲಿ ಒರ್ವ ಕಾಮಿನಿ ಈಶ್ವರನ, ಕಂಗಳಿಗೆ ಅತ್ಯಂತ ರಮ್ಯವಾದ ಅವಯವಂಗಳ ಚೆಲುವಿಕೆಯಂ ನೋಡಿ, ಮನಸ್ಸಿನೊಳಗೆ ಕಾಮಾಗ್ನಿ ಪೊಳೆದೋಱಲಾಗಿ, ಏಱನೆಯ ವಿಕಲಾವಸ್ಥೆ ಶರೀರದೊಳು ನೆಲಸೆ, ತನ್ನ ಮನೆಯ ಹೊಱಹೊಂಟು ಅಂಗಳಕ್ಕೆ ಬಂದು ನಿಂದು, ತೊಳಗುವ ಬೆಳತಿಗೆಯ ಬೆಳುದಿಂಗಳಂ ಕಂಡು ಹವ್ಯೈಸಿ ಉರಿವ ಕಿಚ್ಚಿನ ಬೆಳಕೆಂದು ತಿಳಿದು, ಈ[2]ಮನೆಯ ಕಿಚ್ಚ[2] ನಂದಿಸುವೆನು ಎನುತ್ತ ಬಯಲನೆ ಶೀತಲೋದಕವೆಂದು ಬಗಸೆಯಲ್ಲಿ ಪೊಗೆಪೊಗೆಗು ಚೆಲ್ಲುತ್ತಿರ್ದಳು. ಈ ವಿಕಳತೆಯಿಂದೊಪ್ಪುವ ಸತಿಯ ನೋಡುತ್ತ ಶಿವನು ಮುಂದಕ್ಕೆ ನಡೆದನು.

ಹರನ ಮೇಲಣ ವಿರಹತಾಪದಿಂ ಬೆಳುದಿಂಗ |
ಳುರಿಯಾಗಿ ಸುಡಲೊರ್ವ ಮುಗ್ಧೆ ನೊಂದೆಲೆ ನಿಶಾ |
ಚರನೆ ದೋಷಾಕರನೆ ಎಂದು ಚಂದ್ರನ ನೋಡಿ ಕೊನೆವೆರಳ ಮುರಿದು ಮುಱುಗಿ ||
ಪರಿಣಿಸಿಸುವೆಂತು ಜೀವಿಸುವ ಕಟಕಟ ನಿನ್ನ |
ಕಿರಣದಗ್ನಿಯಲೆಂದು ಗಂಟಿಯುಂ ದನಿಗೆಯ್ದು |
ಕರವ ನೆಟಿಕೆಯಮುರಿದು ಬೈದುಶಾಪಿಸಿಸುಯ್ದುಮರಳಿಮನೆಯಂಪೊಕ್ಕಳು ||

ಟೀಕು—ಕೇಳಿರೈ, ಆ ಸೂಳೆಗೇರಿಯುಲ್ಲೊಬ್ಬ ಸುಂದರಾಂಗಿಯು ಹರನ ಮೇಲಣ ವಿರಹತಾಪದಿಂದ ಬೆಳುದಿಂಗಳು ಉರಿವ ಕಿಚ್ಚಿನ ಮರ್ಯಾದೆಯಲ್ಲಿ ಶರೀರವನು ಸುಡುತ್ತಿರಲಾಗಿ, ಆ ಮುಗ್ಧೆ ಮನನೊಂದು—ಎಲೆ ನಿಶಾಚರನೆ= ರಾತ್ರಿಯಲ್ಲಿ ಚರಿಸುವ ರಕ್ಕಸನೆ, ದೋಷಾಕರನೆ= ಗುರುಸತಿಗಳುಪಿದಾತನೆ, ಎಂದು ಕೋಪದಿಂದ

---

ಪಾ—1. ಮನ. 2. ಮನಗಿಚ್ಚ.

ಚಂದ್ರನ ನೋಡಿ ಖತಿಯಿಂದ ಕೊನೆವೆರಳ ಮುರಿದುಕೊಂಡು, ಮುಱುಕದಿಂದ ಹರಿಣಶಿಶುವೆಂತು ಜೀವಿಪುದಕಟ= ನಿನ್ನೊಗಳಿರ್ದ ಎರಲೆಯುಮುಱು ನಿನ್ನ ಕಿರಣದ ಕಿಚ್ಚಿನಲ್ಲಿ ಹೇಗೆ ಬದುಕೀತು? ಎಂದು ಎರಲೆಯ ಮಱಿಯನು ಘಂಟೆಯ ಧ್ವನಿಮಾಡಿದರಾದರೂ ಬಾರದೆ ಎನುತ್ತ, ಘಂಟೆಯ ಧ್ವನಿಗೆಯ್ದಿದರೂ ಬಾರದೆ ಇರಲಾಗಿ, ಕೆಟ್ಟೆನೆನುತ್ತ, ನೆಟಿಕೆಯ ಮುರಿದು, ಬಯ್ದು ದಿನದಿನಕ್ಕೆ ನಾಶವಾಗಿ ಹೋಗು ಎಂದು ಶಾಪಿಸಿ, ಸುಯ್ದು ಮರಳಿ ತನ್ನ ಮನೆಯಂ ಪೊಕ್ಕು, ವಿಕಟಾವಸ್ಥೆಯಿಂದ ಕಂಗೆಡುತ್ತಿರ್ದ ಕಾಂತೆಯ ನೋಡುತ್ತ ಕಾರುಣ್ಯಮೂರ್ತಿ ಮುಂದಕ್ಕೆ ನಡೆದನು.

ಸೋಗೆಗಣ್ಣಲರ ಸೊಬಗಿನ ಸೀಱೆಯೊರ್ವಳನು |
ರಾಗದಿಂ ಭಿಕ್ಷಾನ್ನಮಂ ತಂದು ನೀಡಿ ನಿಂ |
ದಾಗಲಭವನಕಾಯಕಾಂತಿರಸದೊಳುಮೂಡಿಮುಳುಕಾಡಿಯೋಲಾಡುತುಂ
ಪೋಗಲಾಱದೆಯನಿಮಿಷತೆವಡೆದಿರಲ್ಕವಳ |
ನಾಗಭೂಷಣ ನಿಟ್ಟಿಸಲ್ ನೋಟನೋಟಪ್ಪೊಂ |
ದಾಗೆ ದೃಷ್ಟಿದ್ರವಣವಾಗಿ ಕುಳ್ಳಿರ್ದು ತಲೆವಾಗಿ ಲಜ್ಜಿತೆಯಾದಳು || ೩೬ ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಸೂಳೆಗೇರಿಯಲ್ಲಿ ಒಬ್ಬ ಸೋಗೆಗಣ್ಣ ವನಿತೆ ಬಂದು ನಿಂದು ಶಿವಗೆ ಪ್ರೀತಿಯಿಂದ ಭಿಕ್ಷಮಂ ನೀಡಿ, ಶಿವನ ಕಾಯಕಾಂತಿರಸದೊಳು ಮೂಡಿ ಮುಳುಗಿ, ಆಸಕ್ತಿಯಿಂದ ಹೋಗಲಾಱದೆ ಅನಿಮಿಷದೃಷ್ಟಿಯಿಂದ ನೋಡುತ್ತಿರಲಾಗಿ; ನಾಗಭೂಷನಾದ ಶಿವನು ಅವಳ ನೋಡಲಾಗಿ; ನೋಡಿದ ಮಾತ್ರದಲ್ಲಿ ದೃಷ್ಟಿದ್ರವಣವಾಗಲಾಗಿ; ಕುಳ್ಳಿರ್ದು ತಲೆವಾಗಿ ಲಜ್ಜಿತೆಯಾದ ಕಾಮಿನಿಯಂ ನೋಡುತ್ತ ಕಾರಣರೂಪನಾದ ಕಾಮವೈರಿಯಾದ ಶಿವನು ಮುಂದಕ್ಕೆ ನಡೆದನು, ಎಂದು ಸೂತಮುನೀಶ್ವರನು ಹೇಳುತ್ತಿರ್ದನು.

ಎಲ್ಲಿಂದ ಬಂದನೋ ಈ ಮೋಹನದ ಸಿದ್ಧ |
ನೆಲ್ಲಿಂದ ಬಂದನೋ ಈರೂಪರುದ್ರ ತಾ |
ನೆಲ್ಲಿಂದ ಬಂದನೋ ವಿಸ್ಮಯಾಕಾರ ಕಾರುಣಿಕ ಭಿಕ್ಷಾಪಾತ್ರನು ||
ಎಲ್ಲಿಂದ ಬಂದನೋ ಜಾಣಜಂಗಮರಾಯ |
ನೆಲ್ಲಿಂದ ಬಂದನೋ ಎಂದು ವಾರಾಂಗನೆಯ |
ರೆಲ್ಲ ತಮತಮಗೆ ಜೋಗಾಗಿ ಮನಸೋತು ಮರುಳಾಗಿ ನಿಂದಿರುತಿರ್ದರು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಸೂಳೆಗೇರಿಯಲ್ಲಿ ಸತಿಯರೆಲ್ಲರೂ ತಮತಮಗೆ ನಿಂದು ಹೀಗೆಂದು ನುಡಿಯುತಿರ್ದರು. ಎಲ್ಲಿಂದ ಬಂದನೋ ಈ ಮೋಹನದ ಸಿದ್ಧ= ನೋಡಿದ ಮಾತ್ರದಲ್ಲೇ ಸಮಸ್ತ ಸ್ತ್ರೀಯರನೂ ಮೋಹಿಸುವ ಮಹಾಸಿದ್ಧನೆಲ್ಲಿಂದ ಬಂದನೋ; ಕೋಟಿ ಕಂದರ್ಪ ರೂಪನಾದ ಈ ರುದ್ರನಾವ

ಕಡೆಯಿಂದ ಬಿಜಯಂಗೈದನೋ; ಆಶ್ಚರ್ಯವಾದ ಆಕಾರವನುಳ್ಳ ಕಾರುಣಿಕನಾದ ಈ ಭಿಕ್ಷುಕನೆತ್ತಣಿಂದ ನಡೆತಂದನೋ; ಈ ಜಾಣಜಂಗಮನೇನು ಕಾರಣ ತಲೆದೋಱಿದನೋ; ಈ ಚೆಲುವರ ದೇವನೆಲ್ಲಿಂದ ಬಂದನೋ— ಎಂದು ಬೆಱಗಾಗಿ ಮನಸೋತು ಮರುಳಾಗಿ ನಿಂದು ನೋಡುತಿರ್ದ ವಾರಕಾಂತೆಯರಂ ಕಂಡು ನಸು ನಗೆವೆರಸಿ ನಾಗಕಂಕಣನು ನಲವಿಂದ ನಡೆತರುತಿರ್ದನು.

ತರಳಾಕ್ಷಿಯರ ನೋಟವೀರೈದು ಭಾವವಂ ।
ಬರಿದಾವುದೆನಲು ಹೊಱಬಿಸಿ ನೋಡುವಾನೋಟ ।
ಪುರುಷನಂ ಪ್ರಾಪ್ತನೆನ್ನದ ಭಾವ, ನೋಡದಂದದಿ ನೋಳ್ಪ ನೋಟವಾಸೆ ॥
ಅರೆಗಣ್ಣ ನೋಟವೆ ನಿರಾಶೆ, ಕಡೆಗಣ್ಣಿನಿಂ ।
ದಿರದೆ ನೋಡುವ ನೋಟ ಚಪಲತನವಂಗವಂ ।
ಹರಹಿನೋಡುವ ನೋಟ ಕೊಱತೆನೆಱತೆಗಳನಱಿಸುವ ಭಾವವೆಂದೆನಿಪ್ಪುದು ॥

ಟೀಕು— ಕೇಳಿರೈ, ಎಲೆ ಮುನಿಗಳಿರಾ! ಮತ್ತಾ ಸೂಳೆಗೇರಿಯಲ್ಲಿ ನಾಗರಿಕನೆಂಬ ಸಖನು ಪ್ರೌಢನಾಯಕನ ಕರೆದು ಸ್ತ್ರೀಯರುಗಳಿಗೆ ನೋಟದ ಭಾವ ಹತ್ತಾತೆಱನೆಂದು ನುಡಿವರಲ್ಲಾ, ಅವಾವುವೆಂದು ಕೇಳಲಾಗಿ; ನಾಯಕೋತ್ತಮನು ಹೇಳುತಿರ್ದನು:— ಹೊಱಬಿಸಿ ನೋಡುವ ನೋಟ= ಪುರುಷನಂ ಕಂಡು ಇತ್ತತ್ತ ಹೊಱಬಿಸಿ ನೋಡುವ ಭಾವ, ಪುರುಷನಂ ಪ್ರಾಪ್ತನೆನ್ನದ ಭಾವ= ಪುರುಷನಂ ನೀಚನು, ಪ್ರಾಪ್ತನಲ್ಲವು ಎಂಬ ಭಾವ, ಒಂದು. ನೋಡದಂದದಿ ನೋಳ್ಪ ನೋಟವಾಸೆ= ಪುರುಷನಂ ಕಂಡು ನೋಡದ ಹಾಗೆ ನೋಡುವ ನೋಟವೇ ಆಸೆಯೆಂಬ ಭಾವ, ಎರಡು. ಅರೆಗಣ್ಣ ನೋಟವೆ ನಿರಾಶೆ= ಅರೆಗಣ್ಣಿನಿಂದ ನೋಡುವ ನೋಟವೇ, ಈಶನಿ ಏಕೆ ಇದಿರಾಗಿದ್ದಾನೆಂಬ ನಿರಾಶೆಯೆಂಬ ಭಾವ, ಮೂಱು. ಕಡೆಗಣ್ಣಿನಿಂದಿರದೆ ನೋಡುವ ನೋಟ ಚಪಲತನ= ಕಡೆಗಣ್ಣಿನಿಂದ ನೋಡುವುದು ಪುರುಷನ ಮನಸ್ಸಿಗೆ ಮಮತೆ ಹುಟ್ಟಿಸಬೇಕೆಂಬ ಚಪಲತನದ ಭಾವ, ನಾಲ್ಕು. ಅಂಗವಂ ಹರಹಿ ನೋಡುವ ನೋಟ ಕೊಱತೆನೆಱತೆಗಳನಱಿಸುವ ಭಾವ= ಸರ್ವಾಂಗದಲ್ಲಿ ಅವಯವಂಗಳೆಲ್ಲವನು ಹರಹಿನೋಡುವ ನೋಟ, ಅಲ್ಲಿ ಶೃಂಗಾರದಲ್ಲಿ ಕೊಱತೆ ನೆಱತೆಗಳನು ಅಱಿಸುವ ಭಾವ, ಐದು. ಇನ್ನು ಐದು ಪ್ರಕಾರವನು ಮುಂದಣ ಪದದಲ್ಲಿ ಹೇಳೇನು, ಕೇಳೈ, ಎಲೆ ನಾಗರಿಕ! ಎಂದು ನಾಯಕೋತ್ತಮನು ನುಡಿಯುತ್ತಿರ್ದನು.

ಮರಳಿ ನೋಡುವ ನೋಟವಾಪೇಕ್ಷೆ ನೋಡಿ ಮೊಗ ।
ದಿರುಹುವುದರೋಚಕವ ಭಾವ ತಪ್ಪದೆ ನೋಡು ।
ತಿರೆ ಸಿಕ್ಕಿದಂದವದು ನೋಡಿನೋಡದಿರೆ ಸೊಬಗಿಲ್ಲೆಂದು ಬಿಡೆಬೀಸಿದಾ ॥

ಪರಿ ಮುಗುಳುನಗೆವೆರೆದ ನೋಟ ಕರೆಯುದ ಮುನ್ನ |
ಬರುವಳ್ತಿಯಿಂತಿವಱ ಭೇದವಱಿಯುವರೆ ಸತಿ |
ಯರ ಬಯಸಬೇಡೆಂಬ ಪ್ರೌಢನಾಯಕನ ನುಡಿಗೇಳುತಭವಂ ನಡೆದನು ||

ಟೀಕು—ಕೇಳ್ಳೈ, ಎಲೆ ನಾಗರಿಕ! ಮರಳಿನೋಡುವ ನೋಟವಾಪೇಕ್ಷೆ = ತಿರುಗಿ ಅಕ್ಕಱುಹಿಂಗದೆ ನೋಡುವ ನೋಟವೇ ಅಪೇಕ್ಷೆಯೆಂಬ ಭಾವ, ಆಱು. ನೋಡಿ ಮೊಗದಿರುಹುವುದರೋಚಕ = ನೋಡಿದ ಮಾತ್ರದಲ್ಲೇ ಅಡ್ಡಮೋರೆಯ ನೆತ್ತುವುದು ಅರೋಚಕವೆಂಬ ಭಾವ, ಏಳು. ತಪ್ಪದೆ ನೋಡುತಿರೆ ಸಿಕ್ಕಿದಂದ ವದು = ಅಂಗನೆ ನೆಟ್ಟದೃಷ್ಟಿ ತೆಗೆಯದೆ ಕಟ್ಟಕ್ಕಱಿಂದ ನೋಡುವ ನೋಟನೆ, ಒಳ ಗಾದ ಭಾವ, ಎಂಟು. ನೋಡಿನೋಡದಿರೆ ನೊಬಗಿಲ್ಲೆಂದು ಬಿಡೆಬೀಸಿದಾಪರಿ = ಮೊದಲು ನೋಡಿ ಮತ್ತೆ ನೋಡದೆ ಇದ್ದುದು, ಸೊಬಗಿಲ್ಲ, ಪರಮಮೂಢನೆಂದು ಹಂಗುಹಱಿದ ಭಾವ, ಒಂಬತ್ತು. ಮುಗುಳುನಗೆವೆರೆದ ನೋಟ ಕರೆಯದ ಮುನ್ನ ಬರುವಳ್ತಿ = ನೋಡಿದ ಮಾತ್ರದಲ್ಲಿ ಮುಗುಳುನಗೆವೆರಸಿ ಕಟ್ಟಕ್ಕಱಿಂದ ನೋಡಿದ ನೋಟವೇ, ಕರೆಯದ ಮುನ್ನ ಬರುವಳ್ತಿಯಿಂದ ಒಡಂಬಟ್ಟ ಭಾವ, ಹತ್ತು. ಈ ಹತ್ತು ಪ್ರಕಾರವಾದ ನೋಟದ ಭಾವವನಱಿದವರೇ ಸತಿಯರ ಬಯಸಬೇಕು, ಅಱಿಯದವರು ಬಯಸಿದರೆ ನಗೆಗೇಡಿಯಹರು, ಕಾಣ್ಬೈ, ಎಲೆ ನಾಗರಿಕ! ಎಂದು ನುಡಿವ ಪ್ರೌಢನಾಯಕನ ಸವಿನುಡಿಯ ಕೇಳುತ್ತ ಸರ್ವೇಶ್ವರನು ಮುಂದಕ್ಕೆ ನಡೆದನು.

ನೋಡಲಾಗದೆ ವಾರಿಜಾಕ್ಷಿ ಬಾಯ್ದೆಱೆದು ಮಾ |
ತಾಡಲಾಗದೆ ಮಧುರವಾಣಿ ಕಿನಿಸದೆ ಸರಸ |
ವಾಡಲಾಗದೆ ಮಲಯಮಾರುತವಿನೋದಿ ಬರಸೆಳೆದಪ್ಪಿ ಚುಂಬನವನು ||
ಮಾಡಲಾಗದೆ ಕಲಾಧರೆಯೆನ್ನನೊಲವಿನಿಂ |
ಕೂಡಲಾಗದೆ ಮನೋಹರೆ ಕೊಲುವ ಮುನಿಸಿನಿಸು |
ಬೇಡೆಂದುಕಾಲ್ವಿಡಿದುಬೇಡಿಕೊಳುತಿರ್ದನೊರ್ವಳನೊರ್ವನೊಂದೆಡೆಯೊಳು

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಸೂಳೆಗೇರಿಯಲ್ಲಿ ಮತ್ತೊಂದೆಡೆಯಲ್ಲಿ ಒಬ್ಬ ವಿಟನು ತನ್ನ ವೇಶ್ಯಾಸ್ತ್ರೀ ಮುನಿದಿರಲಾಗಿ ಬೇಡಿಕೊಳ್ಳುತ್ತಿರ್ದನು. ವಾರಿಜಾಕ್ಷಿ = ತಾವರೆಯೆಸಳಿನೋಪಾದಿಯಲ್ಲಿ ಕಾಂತಿವೆತ್ತಿಹ ಕಣ್ಣನುಳ್ಳವಳೇ, ದಯದಿಂದ ನೋಡಲಾಗದೆ; ಮಧುರವಾಣಿ = ಸವಿನುಡಿಯನಾಡುವವಳೇ, ಬಾಯ್ದೆಱೆದು ನಿನ್ನ ಅಧರದ ಸೊಬಗ ತೋಱಿ ಮಾತಾಡಲಾಗದೆ; ಮಲಯಮಾರುತ ವಿನೋದಿ = ತೆಂಕಣ ಗಾಳಿಯೋಪಾದಿಯಲ್ಲಿ ವಿನೋದವ ಬಲ್ಲವಳೇ! ಕೋಪವ ಬಿಟ್ಟು ಸರಸವನಾಡಲಾಗದೆ; ಕಲಾಧರೆ = ಅಮೃತಕಲೆಯ ಅಧರವಾಗಿ ಉಳ್ಳವಳೇ!

ಬರೆಸೆಳೆದಪ್ಪಿಕೊಂಡು ಚುಂಬನ ಮಾಡಲಾಗದೆ ; ಮನೋಹರೆ = ಸುಂದರಾಂಗಿಯಾದವಳೇ ! ತನ್ನೊಳಗೆ ಬಲವಿನಿಂದ ಕೂಡಲಾಗದೆ ; ಕೊಲುವ ಮುನಿಸು ಇಷ್ಟು ಬೇಡವೆಂದು ಒರ್ವ ವಿಟನು ಒಬ್ಬ ಸ್ತ್ರೀಯು ಕಾಲ್ಹಿಡಿದುಕೊಂಡು ಇದ್ದುದನು ಕಂಡು ಶಿವನು ಆ ನುಡಿಗಳಂ ಕೇಳುತ್ತ ಆ ವಿನೋದಮಂ ನೋಡುತ್ತ ಮುಂದಕ್ಕೆ ನಡೆದನು.

ನೋಡಿ ಮುಂದೊಂದು ತಾಣದೊಳೊರ್ವಬಲೆ ಶಿವನ |
ಗಾಡಿಯಂ ಕಲ್ಕರಗುವಂತೊಣಮರಂ ಚಿಗುತು |
ಕೂಡೆ ಪಲ್ಲವಿಸಂತೆ ಮುಗಿಲೊಡ್ಡವಿಸುವಂತೆ ಮಳೆ ಭೋರನೆಱಗುವಂತೆ ||
ಆಡುತಹಿನಿಕರವೊಲ್ಲೈಪಂತೆ ಗೋಕುಲಂ |
ನೀಡಿ ಕಿವಿಗಳನಾಲಿಪಂತೆ ಸಂಗೀತಮಂ |
ಪಾಡಿ ಕಂಬಳಾಶ್ವತರರ ಕರ್ಣಕುಂಡಲಧರನ ನಡೆಗೆ ತಡೆಯಿಟ್ಟಳು || ೪೧ ||

ಟೀಕು—ಕೇಳಿರೈ, ಎಲೆ ಮುನಿಗಳಿರಾ ! ಶಿವನು ಆ ಸೂಳೆಗೇರಿಯಲ್ಲಿ ಬರುತ್ತಿರ್ಪಲ್ಲಿ ಒಬ್ಬ ಕಾಮಿನಿ ದಿವ್ಯಗಾನಮಂ ಹಾಡುತ್ತಿರ್ದಳು. ಅದೆಂತೆಂದರೆ—ಒರ್ವ ಅಬಲೆ ಶಿವನ ಗಾಡಿಕಾಱತನಮಂ ಕಂಡು, ಅತ್ಯಂತ ಪ್ರೀತಿಯಿಂದ ಕಲ್ಲು ಕರಗುವಂತೆ ಗುಂಡಕ್ರಿಯೆಯೆಂಬ ರಾಗವ ಹಾಡಿ ಕಲ್ಲುಕರಗಿಸುತ್ತ, ಒಣಮರ ಚಿಗುತು ಕೂಡೆ ಪಲ್ಲವಿಸುವಂತೆ ವಸಂತಭೈರವಿಯೆಂಬ ರಾಗವ ಹಾಡಿ ಒಣಮರವ ಚಿಗುರಿಸುತ್ತ, ಮುಗಿಲೊಡ್ಡೈಸುವಂತೆ ಮೇಘರಂಜಿಯಂ ಹಾಡುತ್ತ, ಭೋರನೆ ಮಳೆ ಎಱಗುವಂತೆ ಕುರಂಜಿಯೆಂಬ ರಾಗವಂ ಹಾಡುತ್ತ, ಆಡುತಹಿನಿಕರವೊಲ್ಲೈಪಂತೆ = ಸರ್ಪಗಳು ಹೆಡೆಯೆತ್ತಿ ಆಡುತ್ತ ಆಡುತ್ತ ಒಡನೊಡನೆ ಬರುವಂತೆ ಶಂಕರಾಭರಣವೆಂಬ ರಾಗವಂ ಹಾಡುತ್ತ, ಗೋಕುಲಂ ಕಿವಿಗಳ ನೀಡಿ ಆಲಿಪಂತೆ = ಪಶುಗಳು ಸಂತೋಷದಿಂದ ಕೇಳಲು ಮೈಮಱೆವ ಮರ್ಯಾದೆಯಿಂದ ಮೋಹನಭೈರವಿಯೆಂಬ ರಾಗವನು ಹಾಡುತ್ತ, ಕಂಬಳಾಶ್ವತರರೆಂಬ ಸರ್ಪಂಗಳನು ಕರ್ಣದಲ್ಲಿ ಧರಿಸಿದ ಪರಶಿವನ ನಡೆಯನು ಸಂಗೀತವೆಂಬ ಮಂತ್ರದಿಂದ ತಡೆಯಲಾಗಿ ; ಗಾನವಿನೋದಿ ನಿಂದು ಕೇಳುತ್ತ ಪರಿಣಾಮಿಸುತ್ತ ಪಾಪನಾಶನನಾದ ಪರಮೇಶ್ವರನು ಮುಂದಕ್ಕೆ ನಡೆಗನು.

ತಲ್ಲಣಿಸಬೇಡವೆಲೆ ತರಳೆ ಕಾಮನ ಬಿಲ್ಲು |
ಯೆಲ್ಲರೆಂಜಲಿಸಿಯುಗುಳುವ ಕಜ್ಜಿಯುಕಬ್ಬು ಸರ |
ಳೆಲ್ಲವವರಿವರೆನ್ನದೆಲ್ಲ ಕೊಂಡಳ್ತಿಯಲಿ ಮುಡಿದು ಕೊಡಹಿ ಬೀಸಾಡುವ ||
ಮೆಲ್ಲಲರು ಹೆದೆಯು ಪರಿದಾಡುವಳಿ ನೋಡೆ ತಾ |
ನೆಲ್ಲರಜಿಕೆಯಸಂಗನೆಂದೊಬ್ಬ ಸಖಿಯುಮಾ |
ವಲ್ಲಭನಸಲ್ಲಿ ವಿರಹಿಣಿಯಾದ ಸಖಿಯ ಬೋಧಿಸಿದೊಡವಳಿಂತೆಂದಳು ||೪೨

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಸೂಳೆಗೇರಿಯಲ್ಲಿ ಶಿವನು ಬರುತ್ತಿರಲಾಗಿ ಒಬ್ಬ ಮುಗ್ಧೆ ಈಶ್ವರನ ರೂಪಾತಿಶಯವಂ ಕಂಡು ಕಾಮಬಾಣಪೀಡಿತೆಯಾಗಲು, ಅವಳ ವಿರಹವ ತೊಲಗಿಸಬೇಕೆಂದು ಒಬ್ಬ ಸಖಿ ಕಾಮನ ಜಱೆದು ನುಡಿಯುತ್ತಿರ್ದಳು. ತಲ್ಲಣಿಸಬೇಡವೆಲೆ ತರಳೆ = ಎಲೆ ಮುಗ್ಧೆ, ಆದೇಕೆ ತಲ್ಲಣಂಗೊಂಡೆ, ಬತ್ತಿದೆ? ಕಾಮನ ಬಿಲ್ಲೆಂಬುದು ಎಲ್ಲರೂ ಎಂಜಲಿಸಿ ಉಗುಳುವ ಕಱಿಯ ಕಬ್ಬು; ಆತನ ಸರಳುಗಳು ಎಲ್ಲರೂ ಅಳ್ತಿಯಿಂದ ಕೊಂಡು, ತಲೆಗೆ ಮುಡಿದು ಕೊಡಹಿ ಪೇಸಾಡುವ ಮೃದುವಾದ ಹೂವುಗಳು; ಅವನ ಬಿಲ್ಲ ಹೆದೆಯು ನಿಂದಲ್ಲಿ ನಿಲ್ಲದೆ ಪರಿಮಳವಿದ್ದಲ್ಲಿಗೆ ಹಾಱುವ ತುಂಬಿಗಳು; ಆ ಕಾಮನು ಎಲ್ಲರಱಿಕೆಯ ಅನಂಗನು = (ಶರೀರವೇ ಇಲ್ಲದವನು;) (ಹೀಗೆ ಕಾಂತೆಯರ ಕೈಯಲ್ಲಿ) ಅನಂಗನು ಎಂದೆನಿಸಿಕೊಂಬ ಕಾಮನಿಗೆ ಅಂಜಿ, ಈ ಉಮಾಕಾಂತನಾದ ಈಶ್ವರಗೆ ಕಂಗೆಟ್ಟು, ಎದೆಗೆಡದಿರು—ಎಂದು ಬೋಧಿಸಿದ ಸಖಿಯ ಕೂಡೆ ನಾಯಿಕೆ ನುಡಿಯುತ್ತಿರ್ದಳು.

ರವೆಯನಿತು ಕಣ್ಣ ಕಸವಿರಲು ಸೈರಿಸಬಾರ |
ದವಗಡಿಸದೆಂದೊಡಂತಾಗಳೆಳವೆಱೆಯನಾಂ |
ತವ ನೀಳ್ದ ಕೆಂಜಡೆಯ ತುಱುಬಿನವ ಶೇಷಜನಿವರವವ ಕರ ಬ್ರಹ್ಮನ ||
ನವಕಪಾಲನ ತ್ರಿಶೂಲವ ಪಿಡಿದು ಕರವ ಪುಲಿ |
ದೊವಲುಡಿಗೆ ಸಣ್ಣನಡುವಿನ ಚೆಲುವರಿಗೆ ಚೆಲುವ |
ಶಿವನೆನ್ನ ಕಣ್ಣೊಳಗೆ ಸುಳಿಯುತಿರಲೆಂತು ಸೈರಿಪೆ ನಾರಿ ಕೇಳೆಂದಳು || ೪೩ ||

ಟೀಕು—ಕೇಳೆಲೆ ಸಖಿ, ರವೆಯನಿತು......ಬಾರದು = ಅಣುಮಾತ್ರದಷ್ಟು ಕಸವು ಕಣ್ಣೊಳಿದ್ದರೆ ತಾಳಬಾರದು, ಇದ ಹೇಗೆ ತಾಳಬಹುದು. ಎಳವೆಱೆಯ ತಳೆದು ಕೆಂಪಾದ ನೀಳವಾದ ಜಡೆಗಳಿಂದಲಂಕಾರವಾದ ತುಱುಬಿನಿಂದ, ಮಹಾಶೇಷನ ಜನಿವಾರದಿಂದ, ಕೆಂಪಾದ ಕೈಯ್ಯಲ್ಲಿ ಪಿಡಿದ ಬ್ರಹ್ಮಕಪಾಲದಿಂದ, ಬಲಗೈಯ್ಯಲೊಪ್ಪುವ ತ್ರಿಶೂಲದಿಂದ, ಉಟ್ಟ ಹುಲಿದೊಗಲಿನಿಂದ, ಸಣ್ಣ ನಡುವಿನ ಚೆಲುವರ ದೇವನಾದ ಚೆನ್ನಿಗ ಶಿವನು ಕಣ್ಣೊಳು ಸುಳಿಯುತ್ತಿರಲಾಗಿ, ಹೇಗೆ ಸೈರಿಸಲುಬಹುದು? ಎಂದು ಸಖಿಯರ ಕೂಡೆ ಆಡುವ ನಾಯಿಕೆಯ ಮಾತಂ ಕೇಳುತ್ತ, ಶಿವನು ಮುಂದಕ್ಕೆ ನಡೆದನು, ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಇಂದುಧರ ನಿನ್ನ ಹಗೆಗೊಂಡರಾರಾದೊಡಂ |
ಬಂದು ಸಾವಿರವಾಗಿ ಬದುಕುವರದೆಂತೆನಲ್ |
ಕಂದು ನಿನ್ನೊಳ್ ಸೆಣಸಿ ಬೆಂದು ಹುಡಿಹುಡಿಯಾದ ಕಂದರ್ಪನೆಂಬನವನ ||

ಕೊಂದವನು ಕೊಂದೆ ಹುಟ್ಟಿರನಂತೆ ಕೊಲದೆ ಮು |
ನ್ನೊಂದು ರೂಪಾಗಿರ್ದವನ ಹಲವು ಬಗೆಮಾಡಿ |
ಕೊಂದೆ ನೀಂ ಜಗವನೆಂದೊರ್ವಳಭವನ ವಿರಹದಿಂದ ನೊಂದಿಂತೆಂದಳು || ೪೪||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತಾ ಸೂಳೆಗೇರಿಯಲ್ಲಿ ಒಬ್ಬ ವಿರಹಿಣಿಯಾದ ಸ್ತ್ರೀಯು ಈಶ್ವರನೊಡನೆ ನುಡಿಯುತ್ತಿರ್ದಳು. ಇಂದುಧರ ನಿನ್ನ ಹಗೆಗೊಂಡರಾರಾದೊಡಂ = ಚಂದ್ರಮೌಳಿಯಾದ ಎಲೆ ಪರಶಿವನೇ! ನಿನ್ನೊಳಗೆ ಹಗೆತನವ ಅರಾದರೂ ಮಾಡಿದುದುಂಟಾದರೆ ಅವರು ಒಂದುಸಾವಿರವಾಗಿ ಒದುಕುವರು; ಅದೆಂತೆಂದೊಡೆ— ನಿನ್ನೊಳು ಯುದ್ಧವ ಮಾಡಿ ಕಂದು ಬೆಂದು ಹುಡಿಹುಡಿಯಾಗಿ ಹೋದ ಕಂದರ್ಪನೆಂಬವನ ಎಹಗು ಕೊಂದೆಯಲ್ಲ; ಕೊಂದವನು ಹುಟ್ಟದಂತು ಕೆಟ್ಟುಹೋಹಾಗೆ ಕೊಲ್ಲದೆ, ಒಂದು ರೂಪಾಗಿ ಇದ್ದವನ ಹಲವುಬಗೆಯಿಂದ ಮನಸಿಜನ ಮಾಡಿ, ಜಗವನೆಲ್ಲಾ ಕೊಲ್ಲುವಹಗೆ ಮಾಡಿದೆ?— ಎಂದು ಅಭವನ ಕೂಡಣ ವಿರಹದಿಂದ ನುಡಿವ ಮಾನಿನಿಯು ಮಾತ ಕೇಳುತ್ತ, ಮದನಹರನಾದ ಮಹಾದೇವನು ಮುಂದಕ್ಕೆ ನಡೆದನು.

ಮುಂದೊಂದೆಡೆಯೊಳೊರ್ವ ವೇಶ್ಯಾಗಮನ |
ಕೆಂದೊಬ್ಬ ವೃದ್ಧ ಬರುತಿರೆ ಕಾಣುತೇನಯ್ಯಾ |
ತಂದೆಯೆನೆ ನಿನಗೆ ನಾ ತಂದೆನೊತ್ತೆಯನೊತ್ತೆಗೊಡದೆ ನಾಂ ಬರಲಪ್ಪುದೇ ||
ತಂದೆ ನೀನಿಲ್ಲಿ ಸುಳಿಸುಳಿದು ವಿಟರಿಗೆ ಹಳಿವ |
ತಂದೆಯೆನಗಪಕೀರ್ತಿಯನಿದೇತಕಿಲ್ಲಿಗೈ |
ತಂದೆಯಿರಬೇಡ ಹೋಗೆಂದು ಕಂದರ ತಂದೆಮೊಗಕೆ ನಗೆಯಂ ತಂದಳು ||

ಟೀಕು— ಕೇಳಿರೈ, ಎಲೆ ಮುನಿಗಳಿರಾ! ಮತ್ತಾ ಸೂಳೆಗೇರಿಯಲ್ಲಿ ಮುಂದೊಂದು ಠಾವಿನಲ್ಲಿ ಒಬ್ಬ ಯೌವನೆಯಾದ ವೇಶ್ಯಾಂಗನೆಯು ಮನೆಗೆ ಒಬ್ಬ ವೃದ್ಧ ವಿಟನು ಬರಲಾಗಿ, ಕಾಣುತ್ತ,—ಏನಯ್ಯಾ ತಂದೆ,ಎಂದು ನಿರಾಶೆಯಿಂದ ನುಡಿದ ಮಾತಿಗೆ ಆ ವೃದ್ಧ ವಿಟನು ನಿನಗೆ ನಾ ತಂದೆ ಒತ್ತೆಯನು, ಒತ್ತೆಯು ಕೊಡದೆ ನಾನು ನಿನ್ನೆಡೆಗೆ ಬರಬಹುದೆ? ಎನಲಾಗಿ; ನಿನಿಲ್ಲಿಗೆ ತಕ್ಕತಂದೆ ನೀನು ಸುಳಿದು ಈ ಕೇರಿಯಲ್ಲಿ ಸುಳಿವ ವಿಟರಿಗೂ ಹಳಿವ ತಂದೆ, ನನಗಪಕೀರ್ತಿಯು ತಂದೆ, ಇರಬೇಡ ಹೋಗೆಂದು ವೃದ್ಧ ವಿಟನ ಜಬೆದು, ಸ್ಕಂದನಾದ ಷಣ್ಮುಖದೇವರಿಗೆ ತಂದೆಯಾದ ಶಿವನ ಮುಖಕ್ಕೆ ನಗೆಯ ತರಿಸಿದಳು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಹರೆಯುಗಳೆದವಳೆಂದು ಹೋಗದಿರು ಬಾ ವಿಟನೆ |
ಹರೆಯವುಳ್ಳವರೆನ್ನವೋಲಾರನಾಥೊಷಂ |

ಕರೆಯುಬಲ್ಲರೆ ಕರೆಯುಬಲ್ಲವರನುಪಚರಿಸಿ ನೆರೆಯ ಬಲ್ಲರೆ ನೆರೆದರ ||
ಇರದೆ ಸತ್ಕರಿಸಬಲ್ಲರೆ ಹಣ್ಣಿನೊಳಗುಳ್ಳ |
ವರಮಧುರ ಕಸುಗಾಯೊಳುಂಟೆ ಕೂಡಿದೊಡೆನ್ನ |
ಪರಿಯ ತೋಱುವೆ ಪೊಸತನಿನ್ನಾಣೆಯೆಂಬ ಮುದಿಪಾಱುಯಿರ್ದಳದೊಂದೆಡೆ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತಾ ಸೂಳೆಗೇರಿಯಲ್ಲಿ ಒಬ್ಬ ವೃದ್ಧ ವೇಶ್ಯಾಂಗನೆ ಆವ ಪ್ರಕಾರದಲ್ಲಿ ಒಪ್ಪಿದಳು? ಎಂದರೆ—ಸಂಧ್ಯಾ ಸಮಯದಲ್ಲಿ ನಱೆದಲೆಗೆ ಮಸಿಗಪ್ಪಡವ ಮುಱೆಮಾಡಿಕೊಂಡು, ಬಱಿಯೆಲೆಯ ದಾಡೆಯಲ್ಲಿ ಅಡಗಿಸಿಕೊಂಡು, ಮುಂಬಾಗಿಲೊಳು ನಿಂದು, ಕೂಗಿ ನೋಡಿ, ಮನೆಯ ಮುಂದೆ ಸುಳಿವ ಹೊಸಹರೆಯದ ವಿಟರುಗಳಂ ಕಂಡು,—ಹರೆಯುಗಳೆದವಳೆಂದು ಹೊಗದಿರು ಎಲೆ ವಿಟರನ್ನ; ಇಲ್ಲಿಬಾ, ಒಂದಿಷ್ಟು ನಿಲ್ಲು, ಒಂದುಮಾತಂ ಕೇಳು, ಹರೆಯವುಳ್ಳವರು ಆರನಾದರೂ ಕರೆಯುಬಲ್ಲರೆ? ನಿನ್ನಹಾಗೆ ಆಕಾರದವರ ಉಪಚರಿಸಿ ನೆರೆಯಬಲ್ಲರೆ? ಆ ನೆರೆದ ವಿಟರುಗಳನು ಅವರ ಬಳಲಿಕೆಯುನಱಿದು ಸತ್ಕರಿಸಬಲ್ಲರೆ? ಹಣ್ಣಿನಿಂದ ಉಂಟಾದ ಸವಿಯು ಕಸುಗಾಯೊಳುಂಟೆ? ತನ್ನ ಪರಿಯ ತೋಱುವೆನು, ಹೊಸತು ಮಾಡೇನು, ನಿನ್ನಾಣೆ, ನೀಕೊಟ್ಟುದೊಂದು ಪೀಳೆಯವೆ ಸಾಕು; ಕುಡದಿದ್ದರೂ ಬಾ, ಕೂಡಿಹೋಗು ಬಾ—ಎಂದು ನುಡಿವ ಮುದಿಪಾಱಿಯ ಲಜ್ಜೆಗೆಟ್ಟ ನುಡಿಯಂ ಕೇಳುತ್ತ ಶಿವನು ಮುಂದಕ್ಕೆ ನಡೆದನು.

ಇನನುದಯ ತಡೆವುದೇಕೆಂದು ಮುಗ್ಧೆಯರ ಪಗೆ |
ತನವನೊಂದೇ ಬಾರಿ ಮುರಿವೆನೆಂದಲ್ಲಿ ಗೊ |
ತ್ರನಗಂಗಳಿಗೆ ದಾಳಿವರಿದಿರ್ದನೋ ಪತಿವ್ರತೆಯರು ನಿಜಪ್ರಿಯರ ||
ತನುಸೋಂಕನಗಲಿಸಿದನೆಂದು ಶಪಿಸವೆ ಮಾಣ |
ರೆನುತಂಜಿ ಮೈದೋಱದಿರ್ದನೋ ಎಂಬೊರ್ವ |
ಳಿನಿಯನನಗಲ್ದು ವಿರಹದಿನಿರುಳ ಕಳೆಯಲಾಱದೆ ಸಖಿಯೊಳಿಂತೆಂದಳು ||೪೨||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತಾ ಸೂಳೆಗೇರಿಯಲ್ಲಿ ಒಬ್ಬ ಕಾಮಿನಿ ಪುರುಷನಿಲ್ಲದೆ ರಾತ್ರೆ ಬಹಳ ವೇಳೆಯಾಗಿ ತೋಱಲಾಗಿ, ಸೂರ್ಯೋದಯವೇಕೆ ಆಗದೆ ಹೋಯಿತೆಂದು ನುಡಿಯುತಿರ್ದಳು. ಇನನುದಯ.........= ಮುಗ್ಧೆಯರಿಗೆ ಹಗೆಯಾದ, ಗೋತ್ರನಗಂಗಳಿಗೆ= ಕುಲಪರ್ವತಂಗಳಿಗೆ ದಾಳಿವಂದು ಒಂದುವೇಳೆ ಅವರ ಮುನಿಸ ತೀರಿಸಲೆಂದು ತಳುಹಮಾಡಿದನೋ, ಆವ ಪತಿವ್ರತೆಯರುಗಳು ರಾತ್ರಿಯಲ್ಲಿ ತಮ್ಮ ನಿಜಪ್ರಿಯರುಗಳ ತನುಸೋಂಕಿನ ಸುಖದಿಂದಿರಲಾಗಿ ಅಗಸಲಿಸಿದುದೇ ಉಂಟಾದರೆ ತನ್ನ ಶಪಿಸುವರೋ ಎಂದು ಬೇಗ

ಬರಲಂಜಿ ತಳುಹಮಾಡಿದನೋ ದಿನನಾಥನು ಎಂದು ತನ್ನ ಪ್ರಾಣಕಾಂತ ಅಗಲಿರ್ದ ವಿರಹದಿಂದ ಇರುಳ ಕಳೆಯಲಾಱದೆ ಸಖಿಯರೊಂದಿಗೆ ಇನ್ನೂ ಸೂರ್ಯನು ಏಕೆ ಉದಯವಾಗಲಿಲ್ಲವೆಂದು ಮಾತನಾಡುವುದಂ ಕೇಳುತ್ತ ನಿರ್ವಿಕಲ್ಪನಾದ ನೀಲಕಂಠಮೂರ್ತಿ ಮುಂದಕ್ಕೆ ನಡೆದನು ಕಾಣಿರೈ!

ನೋಡಿ ಭ್ರಮಿಸುವ ಚಿಂತಿಸುವ ಸುಯ್ವ ತಾಪಿಸುವ |
ಬಾಡಿ ಬಡವಹ[1] ಊಟದೊಱೆದು ಕಳವಳಿಪ [1]ಮಾ |
ತಾಡದಿಹ ಕಡುಮೂರ್ಛಿಸುವ ಕಡೆಯೊಳಜೀವರೆಂಬೀದಶಾವಸ್ಥೆಗಳೊಳು ||
ನಾಡೆ ನವಮಾವಸ್ಥೆಯಾದ ವಿರಹಂಗಳಿಂ |
ಗೀಡುಮಾಡುವ ದಶಾವಸ್ಥೆಯುಂ ಪೊರ್ದಿಸದೆ |
ಕಾಡುತ್ತಮಾ ಸಾಕುಮಾಡಿ ನಡೆದೀಶ್ವರಂ ಸೂಳೆಗೇರಿಯ ಕಳೆದನು || ೪೮

ಟೀಕು—ಕೇಳಿರೈ ಎಲೆ ಮುನಿಗಳಿರಾ! ಆ ಸೂಳೆಗೇರಿಯಲ್ಲಿ ಸೂತ್ರಧಾರಕನಾದ ಮಹಾದೇವನು ಅಲ್ಲಿದ್ದ ವಾರಾಂಗನೆಯರಿಗೆ ಕಡೆಯಾದವಸ್ಥೆ ಹೊಱಗಾಗಿ ಮಿಕ್ಕ ಅವಸ್ಥೆಗಳನು ಪುಟ್ಟಿಸುತ್ತ ನಡೆತರುತಿರ್ದನು. ಅದೆಂತೆಂದರೆ:—ನೋಡಿ ಭ್ರಮಿಸುವ = ಅವಯವದ ಚೆಲುವಿಕೆಯ ನೋಡಿದ ಮಾತ್ರದಲ್ಲಿಯೇ ಇತರಕರವನಱಿಯದೆ ಮೈಮಱೆದು ನೋಡುವುದು, ಒಂದನೆಯ ಅವಸ್ಥೆ; ಚಿಂತಿಸುವ = ಇಂಥವನ ಕೂಡಬೇಕೆಂಬ ವ್ಯಾಕುಲ ಹುಟ್ಟುವುದು, ಎರಡನೆಯ ಅವಸ್ಥೆ: ಸುಯ್ವ = ಇವ ಕೂಟಕ್ಕೆ ತೆಱಪಾದುದಲ್ಲವೆಂದು ಸುಯ್ಯುವುದು, ಮೂಱನೆಯ ಅವಸ್ಥೆ; ತಾಪಿಸುವ = ಅಷ್ಟಱಿಂದ ತರಹರಿಸಲಾಱದೆ ಜ್ವರ ತೋಱಿದರೆ ತಾಪ ಹುಟ್ಟುವುದು, ಇದೀಗ ನಾಲ್ಕನೆಯ ಅವಸ್ಥೆ; ಬಾಡಿ = ತಾಪದಿಂದ ತನುಕಾಂತಿ ತಗ್ಗುವುದು, ಐದನೆಯ ಅವಸ್ಥೆ; ಬಡವಹ = ಶರೀರವೆಲ್ಲವೂ ಬಡವಾಗುವುದು, ಆಱನೆಯ ಅವಸ್ಥೆ; ಊಟದೊಱೆದು ಕಳವಳಿಪ = ಊಟ ಮೊದಲಾದುವ ಬಿಟ್ಟು ಕಳವಳಿಪುದು, ಏಳನೆಯ ಅವಸ್ಥೆ; ಮಾತಾಡದಿಹ = ಮಾತನಡಗಿಪ್ಪುದು, ಕಾಂತನು ಬಂದರೂ ಇಂದ್ರಿಯವ್ಯಾಪಾರಂಗಳಿಲ್ಲದೆ ಮೌನದಲ್ಲಿಪ್ಪುದು, ಎಂಟನೆಯ ಅವಸ್ಥೆ; ಮೂರ್ಛಿಸುವ = ಮೂರ್ಛಿಸುವುದು, ಜೀವಾತ್ಮನು ಬ್ರಹ್ಮಸ್ಥಾನಕ್ಕೆ ಐದಿ ಶರೀರಲಕ್ಷ್ಯತೆಯಿಲ್ಲದಿರುವುದು ಒಂಬತ್ತನೆಯ ಅವಸ್ಥೆ; ಅಜೀವ = ತನುವಬೀವುದು, ಹತ್ತನೆಯ ಅವಸ್ಥೆ—ಈ ಅವಸ್ಥೆಗಳೊಳಗೆ ಪ್ರಾಣವು ಶರೀರವ ಬಿಟ್ಟು ಹೋಗುವ ಒಂದವಸ್ಥೆ ಹೊಱತಾಗಿ ಸ್ತ್ರೀಯರು ಮಿಕ್ಕ ಅವಸ್ಥೆಗಳಿಂದ [2]ದುಃಖಿಸುತ್ತಿರೆ, ಈಪರಿಮಾಡಿ[2] ಜಗದೀಶ್ವರನು ಮುಂದಕ್ಕೆ ನಡೆದನು.

---

ಪಾ—1 ವಿರಹದಿಂ ಕಳವಳಿಪ; ಊಟವೊರೆವ ಕಳವ ಸಿ.

2. ನೋಡುವರ್ ಕೆಲರು, ಚಿಂತಿಪರ್ ಕೆಲರು, ಸುಯ್ವರ್ ಕೆಲರು, ತಾಪಿಸುವರ್ ಕೆಲರು, ಬಡವಪ್ಪರ್ ಕೆಲರು, ಊಟವನೊಲ್ಲದೆ ಕೆಲರ್ ಕಳವಳಿಸುವರು,

ಕೊಲ್ಲದಿಹುದೇ ಧರ್ಮ ಪರಧನಪರಸ್ತ್ರೀಯ |
ನೊಲ್ಲದಿಹುದೇ ಶೀಲವಧ್ಯಾತ್ಮವಿಷಯವುಮಂ |
ಬಲ್ಲುದೇ ಜ್ಞಾನವೀಶನ ದೈವವೆಂದಱಿವುದೇ ಸಕಲಶಾಸ್ತ್ರಂಗಳ ||
ಬಲ್ಲವಿಕೆ ಸತ್ಯವೇ ಸಚ್ಚರಿತ್ರಕೆ ಮಾತೆ |
ಯಲ್ಲದಿಲ್ಲೆಂದು ನಡೆವುದೆ ಮಾರ್ಗ ಹಲವು ಮಾ |
ತೆಲ್ಲವೇಕೆಂದು ಶ್ರೀಗುರು ಶಿಷ್ಯನಂ ಬೋಧಿಸುತ್ತಿರ್ದನೊಂದೆಡೆಯೊಳು || ೪೯

[ಗಿಳಿಗಳಂ ರಥಕೊಯ್ಯದಾದನಂಗಜನೇಕೆ |
ಕಳಕಂಠಗಳ ಕೊರಳ ಕೆಡಿಸಿದಂದಿಂ ಕೆಡಿಸ |
ದುಳಿದುದಾವಾಗಿಯೇತಕೆ ಮೆಯ್ಯೊಳುರಿಯುನೆಬ್ಬಿಸುವ ತೆಂಕಣ ಗಾಳಿಯು||
ಸುಳಿಯಲೀಸದೆ ಹಸಿದು ನುಂಗಿ ಜೀರ್ಣಿಸದುಗುಳಿ |
ಕಳೆದುದಹಿಯೇಕೆಂದು ಮನದೊಳಗೆ ನೊಂದು ಸಿತ |
ಗಳನಮೇಲಣವಿರಹದಿಂದೊಬ್ಬ ಸತಿ ನುಡಿದಳೆಂದು ಕೆಳದಿಯರಕೂಡೆ] ||

ಎಂಬೀಪದ್ಯವು ಟಿಪ್ಪಣಿಯಿಲ್ಲದ ಒಂದು ಪ್ರತಿಯಲ್ಲಿ ಮಾತ್ರ ೪೮-೪೯ರ ಮಧ್ಯದಲ್ಲಿ ಇದೆ. ಅನ್ಯಕರ್ತೃಕವಾಗಿರಬಹುದು.

[ಟಿಪ್ಪಣಿ—ಕೇಳಿರೈ ಮುನಿಗಳಿರಾ! ಆ ಶಿವನು ಮುಂದೆ ಬರುವಲ್ಲಿ ಆತನ ಮೇಲಣ ವಿರಹತಾಪದಿಂದ ಒಬ್ಬ ಸತಿ ಕೆಳದಿಯರಕೂಡೆ ಹೀಗೆ ನುಡಿಯುತ್ತಿರ್ದಳು. ಅನಂಗಜನು = ಮನ್ಮಥನು, ಗಿಳಿಗಳಂ, ರಥಕ್ಕೆ ಹೂಡದೆ ಏತಕ್ಕೆ ಬಿಟ್ಟನೋ? ಬಿಡದಿದ್ದರೆ ಅವುಗಳ ಚಪ್ಪರಣೆಯನ್ನು ಕೇಳಿ ಈ ವಿರಹತಾಪಕ್ಕೆ ಈಡಾಗೆನು; ನನ್ನ ಹಿಂಸೆಗೇನೇ ಬಿಟ್ಟದು, ಎಂದು ಅಭಿಪ್ರಾಯ. ಮಾಗಿಯೇತಕೆ ......ಕೆಡಿಸಿದಂ = ಮಾಗಿಯೂ ಕೋಗಿಲೆಗಳ ಕಂಠಗಳನ್ನು ಕೆಡಿಸಿದಂದಿನಿಂದ ಕೆಡಿಸದೆ ಏಕೆ ಬಿಟ್ಟಿತು? ಎಂದರೆ ಈಕೋಕಿಲಾಪದಿಂದ ತಾಪ ಜನಿಸಲಾಱದೆಂದು ಭಾವ. ಅಹಿ = ವಾತಾಶನನಾದ ಸರ್ಪವು, ಮೆಯ್ಯೊಳುರಿಯನೆಬ್ಬಿಸುವ ತೆಂಕಣ ಗಾಳಿಯ = ವಿರಹಿಗಳಿಗೆ ಮೆಯ್ಯಲಿ ಹೊಪ್ಪಳೆಗಳನ್ನು ಹುಟ್ಟಿಸುವ ಮಲಯಮಾರುತವನ್ನು, ಸುಳಿಯದಹಾಗೆ, ಹಸಿದು, ನುಂಗಿ, ಜೀರ್ಣಿಸಿಕೊಳ್ಳದೆ, ಏತಕೆ, ಉಗುಳಿಬಿಟ್ಟಿತೋ? ನನ್ನನ್ನು ಹಿಂಸಿಸುದಕ್ಕಾಗಿಯೋ ಎಂದು ಭಾವ. ಎಂದು ಮನದೊಳಗೆ ನೊಂದು ಹೇಳುತ್ತಿದ್ದ ಸತಿಯ ನುಡಿಗಳಂ ಕೇಳುತ್ತ ಜಗದೀಶ್ವರನು ಮುಂದಕ್ಕೆ ನಡೆದನು, ಕಾಣಿರೈ! ಶುಕಪಿಕಲಾಪಗಳು ಮಂದಮಾರುತಸರ್ಶ—ಇವು ವಿರಹೋದ್ರೇಕಗಳೆಂದು ಕವಿಸಮಯ.]

---

ಸುಮ್ಮನಿರ್ಪರು ಕೆಲರು, ಮೂರ್ಛಿಸುವರು ಕೆಲರು, ತನುವಱೆವರ್ ಕೆಲರು, ಇಂತಾದ ದಶಾವಸ್ಥೆಗಳ ಪುಟ್ಟಿಸುತ್ತ ಸಾಕುಮಾಡಿ.

ಟೀಕು—ಕೇಳಿರೈ, ಎಲೆ ಮುನಿಗಳಿರಾ ! ಸೂಳೆಗೇರಿಯು ಕಳೆದು ಆ ಸರ್ವಜ್ಞನಾದ ಪರಮೇಶ್ವರನು ಬರುತ್ತಿರಲು, ಒಬ್ಬ ಗುರುಮೂರ್ತಿಯು ಒಂದು ಠಾವಿನಲ್ಲಿ ತನ್ನ ಶಿಷ್ಯಂಗೆ ಧರ್ಮಶಾಸ್ತ್ರವ ಬೋಧಿಸುತ್ತಿರ್ದನು. **ಅದೆಂತೆಂದೊಡೆ :--**
ಕೊಲ್ಲದಿಹುದೇ ಧರ್ಮ=

" ಅಹಿಂಸಾ ಸತ್ಯಮಸ್ತೇಯಂ [1]ಶೌಚಮಿಂದ್ರಿಯ[1] ನಿಗ್ರಹಃ ॥
ದಾನಂ ವಿದ್ಯಾ ತಪೋಜ್ಞಾನಂ ದಶಕಂ ಧರ್ಮಲಕ್ಷಣಂ ॥ "

ಎಂಬ ಧರ್ಮಶಾಸ್ತ್ರ ಪ್ರಮಾಣದಿಂದ ಸಕಲ ಪ್ರಾಣಿಗಳ ಕೊಲ್ಲದಿಹುದೇ ಧರ್ಮ. ಪರಧನ ಪರಸ್ತ್ರೀಯನೊಲ್ಲದಿಹುದೇ ಶೀಲ=ಪರದ್ರವ್ಯವನಪಹರಿಸದೆ, ಪರಸ್ತ್ರೀಯನು ತಾಯಿಗೆ ಸಮಾನವೆಂದು ಕಾಂಬುದೇ ಶೀಲ ಅಧ್ಯಾತ್ಮವಿಷಯಮಂ ಬಲ್ಲುದೇ ಜ್ಞಾನ=ವೇದಾಗಮ ಪುರಾಣಗಳಿಂದ ನಿತ್ಯಾನಿತ್ಯವಸ್ತುವಿವೇಕವನು ಅಱಿವುದೇ ಜ್ಞಾನ. ಈಶನ ದೈವವೆಂದಱಿವುದೇ ಸಕಲಶಾಸ್ತ್ರಂಗಳ ಬಲ್ಲವಿಕೆ=

ಶ್ರು ॥ " ಏಕೋ ದೈವೋ ನ ದ್ವಿತೀಯೋ "

ಎಂಬ ಶ್ರುತಿಪ್ರಮಾಣದಿಂದ ಶಿವನೇ ದೈವವೆಂದಱಿವುದೇ ಸಕಲ ಶಾಸ್ತ್ರಂಗಳ ಬಲ್ಲವಿಕೆ. ಸತ್ಯವೇ ಸಚ್ಚರಿತ್ರಕೆ ಮಾತೆ ಯಲ್ಲದಿಲ್ಲೆಂದು ನಡೆವುದೆ ಮಾರ್ಗ=

ಶ್ರು ॥ " ಸತ್ಯಮೇವ ಪರಂ ಧರ್ಮಃ ಸತ್ಯಮೇವ ಪರಂತಪಃ ॥ "

ಎಂಬ ಶ್ರುತಿವಚನದಿಂದ ಸತ್ಯವೇ ಸದಾಚಾರಕ್ಕೆ ತಾಯಿಯೆಂದು ಅಱಿವುದೇ ಸನ್ಮಾರ್ಗ. ಹಲವು ಮಾತೆಲ್ಲವೇಕೆಂದು ಶ್ರೀಗುರು ಶಿಷ್ಯಂಗೆ ಸುಜ್ಞಾನಬೋಧೆಯ ಬೋಧಿಸುತ್ತಲಿರುವ ನುಡಿಗಳಂ ಕೇಳುತ್ತ ಮಹಾದೇವನು ಮುಂದಕ್ಕೆ ನಡೆದನು.

ಅತ್ತತ್ತ ಬೇಸಱಿಸುತಿದೆ ಮಗುವು ಕೋಣೆಯೊಳ |
ಗತ್ತೆಮಾವದಿರ ಮಲಗುವ ನಿದ್ರೆ ಕೆಟ್ಟಪುದು |
ಹೊತ್ತುಱಿದ್ದನ್ನ ಪತಿಯೂರ್ಗೆ ಪೋದಂ ಬಾರನತ್ತಲಿನ್ನೇನಾದನೋ ||
ಹೊತ್ತು ಹೋಗದು ನಡುಮನೆಯು ಪರಳುನೆಲ ಮೊಯ್ಯು |
ನೊತ್ತಿ ನಿದ್ದೆಯ ಕಿಡಿಸಿತೇಗುವೆನೊ ವಿಧಿಯೆಂದೆ | [ಯೊಳಂ || ೫೦
ನುತೆ ಪೂರ್ವ ಜಾರೆ ಜಾರಗೆ ಪದಿರ ನುಡಿದಳುಭಯಾರ್ಥಮಾಗೊಂದೆಡೆ

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಶಿವನು ಮುಂದೆ ಒರುವಲ್ಲಿ ಒಬ್ಬ ಜಾರೆ ತನ್ನ ವಲ್ಲಭನು ಬರಬೇಕೆಂದು ಹದಿರಿನಿಂ ನುಡಿಯುತ್ತಿರ್ದಳು. ಅತ್ತತ್ತ ಮಗುವು ಬೇಸಱಿಸುತಿದೆ=ಮಗುವಿನ ಸಂದಿಯಿಂದ ಬಂದರೆ ಕಾಣಬಾರದೆಂಬ ಹದಿರು. ಕೋಣೆಯೊಳಗೆ ಮಲಗಿರುವ ಅತ್ತೆಮಾವದಿರ ನಿದ್ರೆ ಕೆಟ್ಟಪುದು=ಕೂಸು

---

1. ಹ್ರೀಸತ್ಯೇಂದ್ರಿಯ

ಕೂಗುತಿದೆ, ಆಡುವ ಮಾತು ಕೇಳದು ಎಂದೂ ಅವರು ಚೆನ್ನಾಗಿ ಮಱೆದು ಮಲಗಿದ್ದಾರೆಂದೂ ಹೇಳುವ ಹದಿರು. ಹೊತ್ತಱೆದ್ದೆನ್ನ ಪತಿಯೂರ್ಗೆ ಪೋದಂ ಬಾರಸತ್ತಲಿನ್ನೇನಾದನೋ = ಎಂದಾಡುವ ಮಾತು ನನ್ನ ಒತ್ತಿನಲ್ಲಿ ಗಂಡನಿಲ್ಲವೆಂದು ಹೇಳುವ ಹದಿರು. ಹೊತ್ತು ಹೋಗದು = ತಾನೊಬ್ಬಳೇ ಇರುವಳೆಂಬ ಹದಿರು. ನಡುಮನೆಯ ಹರಳುನೆಲ ಮೆಯ್ಯನೊತ್ತಿ ನಿದ್ರೆಯ ಕೆಡಿಸಿತು = ಇನ್ನೇನು ಮಾಡಲಿ, ಎಂಬ ಮಾತು ನೀನು ಬಂದರೆ ನಾನು ಬಂದೇನೆಂಬ ಹದಿರು. ಈ ಪ್ರಕಾರದಲ್ಲಿ ಒಬ್ಬ ಹಾದಱಗಿತ್ತಿ ಹೊಱಗೆ ಸುಳಿವ ಜಾರಗೆ ನುಡಿವ ಹದಿರ ಕೇಳುತ್ತ ಮುಂದಕ್ಕೆ ನಡೆದನು.

ಒಡನೊಱಗಿದಾತ್ಮವಲ್ಲಭನಱಿಯದೊಲು ನಟ್ಟ |
ನಡುವಿರುಳಿನೊಳು ಮನೆಯ ಪೊಱಟು ಕತ್ತಲೆಯೊತ್ತು |
ವಿಡಿದು ನಿಂದಿರಲು ಮೆಲ್ಲನೆ ಪುರುಷಮಾತ್ರದಂದವ ತಳೆದರಾರಾದೊಡಂ ||
ನುಡಿದುದೇ ಸಂಜ್ಞೆ ನೋಡಿತೆ ಸನ್ನೆ ಮಱೆದೊರಕಿ |
ದೆಡೆಯೆ ಮನೆ ಬಿದ್ದುದೇ ಪಾಸು ಪೊದ್ದಿತೆ ಕೂಟ |
ತಡೆಯದಿದ್ದುದೆ ನಿಲ್ಲದೋಟವೆಂದೆನಿಪ ಜಾರೆಯರಾಟಮಂ ಕಂಡನು || ೫೧

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತೊಂದೆಡೆಯೊಳು ಒಬ್ಬ ಜಾರೆ ಒಂದು ಹಾಸಿಕೆಯಲ್ಲಿ ಮಲಗಿದ್ದ ಗಂಡನಱಿಯದ ಹಾಗೆ ನಟ್ಟನಡುವಿರುಳಿನಲ್ಲಿ ಮನೆಯ ಹೊಱಹೊಂಟು ಒಂದು ಕತ್ತಲೆಯೊತ್ತುವಿಡಿದು ನಿಂದಿರಲಾಗಿ, ಆ ಸಮಯದಲ್ಲಿ ಬ್ರಾಹ್ಮಣ ಮೊದಲಾಗಿ ಚಂಡಾಲಕಡೆಯಾಗಿ ಇದ್ದ ಹದಿನೆಂಟು ಜಾತಿಯೊಳಗೆ ಆರಾದರೂ ಪುರುಷಮಾತ್ರ ಗಂಡಸು ಎಂಬುವನು, ನುಡಿದುದೇ ಸಂಜ್ಞೆ = ಅವನು ಸುಮ್ಮನೆ ನುಡಿದುದೇ ಸನ್ನೆ; ಮಱೆದೊರಕಿದೆಡೆಯೆ ಮನೆ = ಹಿತ್ತಲುಸಂದಿಗೊಂದಿ ಪಾಳ್ಮನೆ ಪಾಳಂಗಡಿ ಮೊದಲಾದ ದೊರಕಿದೆಡೆಯೇ ಭೋಗಿಸುವ ಮನೆ; ಬಿದ್ದುದೇ ಪಾಸು = ಬಿದ್ದೆಡೆಯೆ (ಹಾಸಿಕೆ); ಪೊದ್ದಿತೆ ಕೂಟ = ತಾಗದ ಚುಂಬನ, ಧ್ವನಿಹುಟ್ಟದ ಕರಘಾತ, ಅಗಲುವ ಕೂಟ, ಈಪ್ರಕಾರದಲ್ಲಿ ಹೊದ್ದಿದುದೇ ಸುರತ; ನಿಲ್ಲದಿದ್ದುದೆ ಓಟ = ತಳವಾಱರು ಆಪ್ತರು ಬಂಧುಗಳು ಪತಿ ಮೊದಲಾದವರು ಕಂಡೇಱಿಪರೆಂದು ನಿಲ್ಲದೆ ಕತ್ತಲೆಮನೆಯಲ್ಲಿ ಮಱೆಯಲ್ಲಿ ಸೂರ ಬೆಂಬಱಿಗೊಂಡು ಓಡಿಹೋಗಿ ತನ್ನ ಮನೆಯಂ ಪೊಗುವ ಜಾರೆಯರಂ ನೋಡುತ್ತ ಜರಾಮರಣರಹಿತನಾದ ಜಗದೀಶ್ವರನು ಮುಂದಕ್ಕೆ ನಡೆದನು.

ಜಾರೆಯರ ದುಶ್ಚೇಷ್ಟೆಯಂ ನೋಡಿ ನಗುತ ಪರ |
ನಾರಿಯರೆನುತ್ತವರ ಭಾವನೆಗೆ ಹೊಱಗಾಗು |
ತೋರಂತೆ ಪತಿವ್ರತೆಯರುಗಳ ಸದ್ಭಕ್ತಿಭಾವನೆಗೆ ತಾನೊಳಗಾಗುತ ||

ಕಾರುಣ್ಯರಸವ ಸೈಗರ್ಯೆಯುತನಿಬರ ಮೇಲೆ ।
ಕೇರಿಕೇರಿಯಲಿ ಭಿಕ್ಷವ ಮಾಡುತೈದಿ ಮದ ।
ನಾರಿ ದ್ವಾರಾವತೀಪುರವರಾಧೀಶ್ವರನ ಅರಮನೆಗೆ ನಡೆತಂದನು ‖ ४೭

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಶೂಲಪಾಣಿಯಾದ ಮಹಾದೇವನು ಜಾರೆಯರೆಸಗಿದ ದುಷ್ಟವಿಕಾರಂಗಳಂ ನೋಡಿ ನಗುತ್ತ, ಚೇಷ್ಟಾಭಾವಕ್ಕೆ ಹೊರಗಾಗುತ್ತ, ಪತಿವ್ರತೆಯರುಗಳು ಮಾಡಿದ ಸದ್ಭಕ್ತಿಭಾವನೆಯಿಂದ ನೀಡಿದ ಭಿಕ್ಷಮಂ ಕೈಕೊಂಡು, ಅವರ ಮೇಲೆ ಕಾರುಣ್ಯರಸವ ಕರೆಯುತ್ತ, ಭಿಕ್ಷಮಂ ಬೇಡುತ್ತ, ಮದನವೈರಿಯಾದ ಶಿವನು ದ್ವಾರಕಾಪುರಕ್ಕೆ ಅಧಿಪತಿಯಾದ ದೇವಕಿದೇವೀ ಕುಮಾರಕನಾದ ಶ್ರೀಕೃಷ್ಣದೇವನ ಅರಮನೆಗೆ ನಡೆತಂದನು ಕಾಣಿರೈ, ಎಲೈ ಮುನಿಗಳಿರಾ! ಎಂದು ಸೂತಮುನೀಶ್ವರನು ನೈಮಿಶಾರಣ್ಯವಾಸಿಗಳಾದ ಋಷಿಗಳಿಗೆ ಹೇಳುತ್ತಿರ್ದನು.

— ಇಂತು ದ್ವಿತೀಯಸಂಧಿಗೆ ಜಯಮಂಗಳಂ —

# ತೃತೀಯ ಸಂಧಿ

**ಸೂಚನೆ :—**

ಧರೆಯ ಭಾರವನಿಳುಹಿ ನೀನೆನ್ನ ಕರದಜನ |
ಶಿರಪಾತ್ರೆ ತಣಿಸೆಂದದಂ ಕುರುಕ್ಷೇತ್ರದೊಳ |
ಗಿರಿಸಿ ಕೃಷ್ಣಗೆ ಪೇಳಿ ಮುರಳಿ ಕೈಲಾಸದೊಳು ಹರನು ಸುಖದಿಂದಿರ್ದನು ||

ಟೀಕು—ಈ ಸಂಧಿಯು ಕಥಾಗರ್ಭ ಅದು ಪ್ರಕಾರವೆಂದರೆ – ಶಿವನು ದ್ವಾರಕಾಪುರದಲ್ಲಿ ಶ್ರೀಕೃಷ್ಣನ ಅರಮನೆಗೆ ಬಂದು, ಆತ ನೀಡಿದ ಭಿಕ್ಷವುಂ ಕೈಕೊಂಡು, ಭೂಮಿಯು ಭಾರವನಿಳುಹೆಂದು ಶ್ರೀಕೃಷ್ಣನಿಗೆ ಹೇಳಿ, ಕೆಯ್ಯಲಿರ್ದ ಬ್ರಹ್ಮನ ಕಪಾಲವನ್ನು ತಣಿಪುದೆಂದು ಆ ಪಾತ್ರೆಯನ್ನು ಕುರುಕ್ಷೇತ್ರದಲ್ಲಿ ಇಳುಹಿ, ಹರನು ಕೈಲಾಸಕ್ಕೆ ಬಂದು ಸಿಂಹಾಸನಾರೂಢನಾಗಿ ಇರ್ದನು ಎಂಬುದು ಈನಿಗುದಿಯು ಕಥಾಗರ್ಭ.

ಮುಡಿಯ ನಿಡುಜಡೆಯ ನವಕರ್ಣಪತ್ರದ ಫಣಿಯ |
ಜಡಿವ ಕುಂಡಲದ ಪೊಳೆವೈರದಾಳಿಯ ಕೊರಲ |
ನಡುಗಱೆಯಹಾರಕೆಡೆಗುಡದುರೋಜದೊಳುಲಿವರುಂಡಮಾಲೆಯ ವಕ್ಷದ ||
ಕಡಗದ ಕರದ ತ್ರಿಶೂಲದ ನಿಱಿವಿಡಿದ ವಸ್ತ್ರ |
ದುಡುಗೆಯ ಪುಲಿಯ ಚರ್ಮದರ್ಧಾಸನರೂಪನಂ |
ದೊಡಲೊಳಗೆತೋಱಿಮೆಱೆದರ್ಧನಾರೀಶ್ವರಂಕುಡುಗೆಸನ್ಮತಿಸೌಖ್ಯವ ||

ಟೀಕು—ಕವೀಶ್ವರನು ಸಂಧಿಯ ಪ್ರಾರಂಭದಲ್ಲಿ ಅರ್ಧನಾರೀಶ್ವರನ ಸ್ತೋತ್ರವಂ ಮಾಡುತಿರ್ದನು. ಮುಡಿಯ ನಿಡುಜಡೆಯ =ಮುಡಿಯಾಡುವೆಡೆ ಒಂದು ಕಡೆಯಲ್ಲಿ ತುರುಬು, ಒಂದುಕಡೆಯಲ್ಲಿ ಜಟಾಮುಕುಟ; ನವಕರ್ಣಪತ್ರದ ಫಣಿಯ ಜಡಿವ ಕುಂಡಲದ = ಒಂದುಕಡೆಯಲ್ಲಿ ನವರತ್ನ ಖಚಿತವಾದ ಓಲೆ, ಒಂದು ಕಡೆಯಲ್ಲಿ ಸರ್ಪಕುಂಡಲ; ಪೊಳೆವೈರದಾಳಿಯ ಕೊರಲ ನಡುಗಱೆಯ = ಒಂದೊಂದು ಕಡೆಯ ಕೊರಲಿನಲ್ಲಿ ಒಪ್ಪುವೈರದಾಳಿಯಿಂದ, ಬಲಗಡೆಯಲ್ಲಿ ಒಪ್ಪುವ ಕಪ್ಪುಗೊರಲಿಂದ ; ಹಾರಕೆಡೆಗುಡದುರೋಜದ...ವಕ್ಷದ = ಮುತ್ತಿನ ಹಾರಂಗಳಿಗೆ ತೆಱಹುಗುಡದ ಸ್ತನದಿಂದೊಪ್ಪುವ, ವಾಮಭಾಗದಲ್ಲುಲಿವ ರುಂಡಮಾಲೆಯಿಂದೊಪ್ಪುವ ಉರಸ್ಸನುಳ್ಳ; ದಕ್ಷಿಣಭಾಗದ ಕಡಗದ ಕರದ ತ್ರಿಶೂಲದ = ಎಡದ ಕೈಯಲ್ಲಿ ಒಪ್ಪುವ ರತ್ನದ ಕಡಗದ, ಬಲದ ಕೈಯಲ್ಲೊಪ್ಪುವ ತ್ರಿಶೂಲದ; ನಿಱಿ......ಪುಲಿಯ

ಚರ್ಮದ = ಎಡಗಡೆಯಲ್ಲೊಪ್ಪುವ ದಿವ್ಯಾಂಬರದುಡುಗೆಯು, ಬಲಗಡೆಯಲ್ಲೊಪ್ಪುವ ಪುಲಿಯ ಚರ್ಮದಿಂದ ; ಅರ್ಧಾಸನದಲ್ಲಿ ಮೂರ್ತಿಗೊಂಡು ಒಂದು ಶರೀರದಲ್ಲಿ ಅರ್ಧವನ್ನು ದೇವಿಯರಿಗೆ ಕೊಟ್ಟು ಅರ್ಧನಾರೀಶ್ವರನಾಗಿ ಮೆಱೆವ, ಮಹಾದೇವನು ನಿಮಗೆ ಧನಕನಕವಸ್ತುವಾಹನ ಆಯುರಾರೋಗ್ಯ ಮೊದಲಾದ ಸುಖಸಂಪತ್ತ ಕೊಟ್ಟು ಪ್ರಿಯದಲ್ಲಿ ರಕ್ಷಿಸಲಿ ! ಎಂದು ಆಶೀರ್ವಾದವಂ ಮಾಡುತಿರ್ದಾನು.

ಪರಿ ಲೇಸುಲೇಸು ! ಹೋ ! ಹೋ ! ನಿಲ್ಲು ! ನಿಲ್ಲು ! ಭಾ !
ಪುರೆ ! ಭಲರೆ ! ಜಾಗುರೇ ! ನಿನಗೆ ಸರಿಯಿಲ್ಲವೀ |
ತೆಱದ ಸುಕವಿತ್ವ ಸುಮಧುರ ವಿಚಿತ್ರ ವಿಸ್ತಾರವೆಂದೆಂಬ ನಾಲ್ಕುಬಗೆಯ ||
ವಿರಚಿಸಲು ಬಲ್ಲ ವಸ್ತುಕಕವೀಂದ್ರರ ವಸ್ತು |
ನಿರತವರ್ಣಕಕವೀಶ್ವರರ ಕರ್ಣಾಭರಣ |
ಗುರುಲಿಂಗಪ್ರಭುವು ಪೇಳ್ದ ಕೃತಿಯು ನಲಿದಿದಂ ಪೊಗಱದವರಾರಿಳೆಯೊಳು||

ಟೀಕು —ಕವೀಶ್ವರನು ತನ್ನ ಸಾಮರ್ಥ್ಯವಂ ಪೇಳುತಿರ್ದಾನು. ಆಸುಕವಿತ್ವ, ಮಧುರಕವಿತ್ವ, ವಿಚಿತ್ರಕವಿತ್ವ, ವಿಸ್ತಾರಕವಿತ್ವವೆಂಬ ಕವಿತಾಹೃದಯವನೆಲ್ಲಬಲ್ಲ ರಸಿಕರು—ಲೇಸು ಲೇಸು ! ಭಾಪುರೆ ! ಭಲರೇ ! ಜಾಗುರೇ ! ಹೋ ! ಹೋ ! ಎಂದು ಕೊಂಡಾಡುವ ಮರ್ಯಾದೆಯಲ್ಲಿ ವಸ್ತುಕ ಕವಿಗಳಿಗೆ ವಸ್ತುವೆನಿಸಿ ವರ್ಣಕಕವಿಗಳಿಗೆ ಕರ್ಣಾಭರಣವೆನಿಸಿ ಗುರುಲಿಂಗಕವೀಶ್ವರನೆಂಬಾತನು ಮಾಡಿದ ಉಪಮೆಯಿಲ್ಲೆಂಬ ಕೃತಿಯನು ಭೂಮಿಯಲ್ಲಿ ಕೊಂಡಾಡದವರುಂಟೇ ! ಎಂದು ಕವೀಶ್ವರನು ಹೇಳುತಿರ್ದಾನು.

ರಮಣಿಯರು ಲಾಲಿಸಿದರಾದೊಡಂ ತಮ್ಮ ನಿಜ |
ರಮಣರಾಲಲನೆಯರ ಕೇಳಮೇಳದ ಸುಖವ |
[1]ಮಮತೆಯಲಿ ನೆನೆನೆನೆದು ಹಾರೈಸುವಂತೆ ರಮಣರು ಲಾಲಿಸಿದರಾದೊಡೆ[1] ||
[2]ರಮಣಿಯರು ಲಾಲಿಸಿ ಸ್ನೇಹಮೋಹವ ನೆನೆದು |
ಮಮತೆಯಲಿ ಹಾರೈಸುವಂದದಿಂದೊಲ್ದು[2] ಸ |
ತ್ಕ್ರಮವನಂಗೀಕರಿಸಿ ಮೆಱೆವುದೀ ಶಿವನ ಭಿಕ್ಷಾಟನದ ಕೃತಿಯರಚನೆ||೩

ಟೀಕು—ಕವೀಶ್ವರನು ಭಿಕ್ಷಾಟನದ ಚರಿತ್ರೆಯನ್ನು ಕೇಳುವರಿಗೆ ಈಪ್ರಕಾರ ಮಹಾಪರಿಣಾಮವ ಕುಡುವುದು ಎಂದು ಹೇಳುತಿರ್ದಾನು. ರಮಣಿಯರು ಕೇಳಿದುದೇ ಉಂಟಾದರೆ ತಮ್ಮ ರಮಣರು ತಮ್ಮ ಕೂಡೆ ಸರಸ ಸವಿಮಾತು ಕೇಳಮೇಳ ಮೊದಲಾದ ಸುಖದ ಮಾತುಗಳನ್ನು ಅವ ಮರ್ಯಾದೆಯಲ್ಲಿ ಅತಿಪ್ರೇಮದಿಂದ

ಪಾ—1. ಹಾರೈಸುವಂತೆ ರಮಣರು ಲಾಲಿಸಿದರಾದರತಿಪ್ರಿಯುದೆ.

2. ರಮಣಿಯರುಗಳನೇಹಮೋಹಗಳ ನೆನೆನೆನೆದು…ಹಾರೈಸುವಂದದಿಂದೊಲ್ದು

ಕೇಳುವರು, ಪುರುಷರು ತಮಗೆ ಮೋಹವಾದ ಸತಿಯಾಡಿದ ಮಾತುಗಳನ್ನು ಆವ ಮರ್ಯಾದೆಯಲ್ಲಿ ಅತಿಪ್ರೇಮದಿಂದ ಕೇಳುವರು–ಆ ಮರ್ಯಾದೆಯಿಂದ ಈಭಿಕ್ಷಾಟನದ ಚರಿತ್ರವ ಕೇಳುವವರ ಕಿವಿಗೆ ಅತಿಸೊಗಸ ಕೊಡುವುದು ಎಂದು ಕವೀಶ್ವರನು ಹೇಳುತಿರ್ದಾನು.

ಅರಮನೆಯ ದ್ವಾರಪಾಲಕ ವಿಷ್ವಕ್ಸೇನನೀ ।
ಶ್ವರನ ಹೋಗಬೇಡೆಂದು [1]ವಾರಿಸಲು[1] ಶೂಲದಿಂ ।
ದಿರಿದು ನೆಗಹಲು ಬದುಕಿದೆನೆನಲದೇಕೆನಲು ಹರಿಯಜರಱಸಿ ಕಾಣವ ॥
ಚರಣಮಂ [2]ಸಿರಿಮುಡಿಯು[2] ಕಂಡೆನನಱಿಂದೆನಗೆ ।
ಸರಿಯಾರೆನಲು ಮೆಚ್ಚಿದೆಂ ಬೇಡು ವರವನೆಂ ।
ದರೆ ಬೇಡವೆನಗಿದೇ ಪರಮಪದವೆನೆ ಹರನದಂ ಕರುಣಿಸುತೆ ನಡೆದನು ॥ ೪

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆಶಿವನು ದ್ವಾರಕಾಪುರವಂ ಪೊಕ್ಕು ಕೇರಿಕೇರಿಯಲ್ಲಿ ಭಿಕ್ಷವಂ ಬೇಡಿ ಅನವರತ ಲೀಲಾಲೋಲಚಿತ್ತನಾಗಿ ದ್ವಾರಕಾಪುರದ ಲಕ್ಷ್ಮೀಕಾಂತನಿರ್ದ ಅರಮನೆಗೆ ಭಿಕ್ಷಾರ್ಥಿಯಾಗಿ ಬರುತಿರ್ಪಲ್ಲಿ, ಆಅರಮನೆಯ ದ್ವಾರಪಾಲಕನಾಗ ವಿಷ್ವಕ್ಸೇನನೆಂಬಾತನು ಈಶ್ವರನಂ ಅರಮನೆಗೆ ಹೋಗಬೇಡ ಎಂದು ಬಾಗಿಲೊಳು ತಡೆಯಲಾಗಿ, ತ್ರಿಶೂಲದಿಂದಿರಿದು ಅವನಂ ನೆಗಹಲಾಗಿ, ಬದುಕಿದೆನೆನಲಾಗಿ; ಅದೇಕೆಂದರೆ, ಹರಿಯಜರಱಸಿ ಕಾಣದ ಚರಣಮಂ ಸಿರಿಮುಂಡಿಯುಂ ಕಂಡೆಂ—ಹರಿಯಱಸಿ ಕಾಣದೆ ಹೋದ ಶ್ರೀಪಾದಪದ್ಮವಂ ಬ್ರಹ್ಮನಱಸಿ ಕಾಣದೆ ಹೋದ ಶ್ರೀಮುಡಿಯುಂ ಕಂಡೆಂ; ಬಂದಾಗ ನಿನ್ನ ಶ್ರೀಪಾದವ ಕಂಡೆ, ಇರಿದು ನೆಗಹಿದಾಗ ನಿನ್ನ ಮಸ್ತಕವ ಕಂಡೆ, ನನಗೆ ಸರಿಯಾರೆಂದು ನುಡಿಯಲಾಗಿ; ನಿನಗೆ ಮೆಚ್ಚಿದೆನು ಒಂದು ವರವ ಬೇಡೆಂದು ಶಿವ ನಿರೂಪಿಸಲಾಗಿ: ಇದೇ ಎನಗೆ ಪರಮಪದ; ಇದನೆ ಕರುಣಿಸೆಂದು ಬೇಡಿಕೊಂಡ ವಿಷ್ವಕ್ಸೇನನ ಶೂಲಾಗ್ರದಲ್ಲಿ ತಳೆದು, ಮುಂದಕ್ಕೆ ಶ್ರೀಕೃಷ್ಣಸ್ವಾಮಿಯ ಅರಮನೆಗೆ ನಡೆದನು.

ಇದು ರಾಜರಾಜನಂತಃಪುರದ ನವನಿಧಿಯ ।
ಸದನಂಗಳೋ ದ್ವಾದಶಾದಿತ್ಯರಿಂಗೆ ಮಾ ।
ಡಿದ ಪದ್ಮರಾಗದ ಗೃಹಂಗಳೋ ಮೇಣು ಸುರಪತಿಗಿಂದ್ರನೀಲದಿಂದ ॥
ಒದವಿಸಿದ ನಿಳಯಂಗಳೋ ಎನಲ್ಕಧಿಕಸಂ ।
ಪದದಿಂ ಪ್ರಕಾಶದಿಂ ಸೌಭಾಗ್ಯದಿಂದಲಾ ।
ಮದನಹರನಯನಕ್ಕೆ [3]ಸೊಬಗನುಱೆಬೀಱುತ್ತೆ ಕೃಷ್ಣನರಮನೆಯೆಸೆದುದು[3] ॥

---

ಪಾ.—1. ವಕ್ರಿಸಲು. 2. ಮುಡಿಯುಂ. 3. ಸೊಗಸಂಬೀರೆ ಕೃಷ್ಣನರಮನೆಗಳೆಸೆ ರಾಜಿಸಿದುವು.

ಟೀಕು – ಕೇಳಿರೈ, ಎಲೆ ಮುನಿಗಳಿರಾ! ಈಶ್ವರನು ಈಪ್ರಕಾರದಲ್ಲಿ ಶ್ರೀಮಹಾವಿಷ್ಣುವಿನ ಅರಮನೆಗೆ ಬರುತಿರ್ಪಲ್ಲಿ, ಅದು ಆವ ಪ್ರಕಾರದಲ್ಲಿ ಒಪ್ಪಿದ್ದಿತು? ಎಂದರೆ—ಇದು ರಾಜರಾಜನಂತಃಪುರದ ನವನಿಧಿಯ ಸದನಂಗಳೋ = ಕುಬೇರನರಮನೆಯಲ್ಲಿ ನವನಿಧಿಗಳಿಪ್ಪ ಮನೆಗಳೋ ಎಂಬ ಹಾಗೆ ಇದ್ದಿತು. ದ್ವಾದಶಾದಿತ್ಯರುಗಳಿಹುದಕ್ಕೆ ಮಾಡಿದ ಪದ್ಮರಾಗರತ್ನಂಗಳ ಮನೆಗಳೋ ಎಂಬ ಮರ್ಯಾದೆಯಿಂದ, ದೇವೇಂದ್ರಂಗೆ ನಿರ್ಮಿಸಿದ ಇಂದ್ರನೀಲದ ಗೃಹಂಗಳೋ ಎಂಬ ಮರ್ಯಾದೆಯಲ್ಲಿ, ನವನಿಧಿಗಳಿಂದೊಪ್ಪುವ ಸಂಪತ್ತಿನಿಂದಲೂ ನವರತ್ನಂಗಳ ಕಾಂತಿಯಿಂದಲೂ ಸತಿಯರಿಂದೊಪ್ಪುವ ಸೌಭಾಗ್ಯದಿಂದಲೂ ಶ್ರೀಕೃಷ್ಣನ ಅರಮನೆಯೊಳಗಣ ಪ್ರಾಕಾರ ಹರ್ಮ್ಯಸೌಧಂಗಳಿಂದೊಪ್ಪುವ ಮನೆಗಳಂ ನೋಡುತ್ತ ಶಿವನು ನಡೆತರುತಿರ್ದನು.

ಘನತಿಮಿರರಾಜನೆಂಬನ ಪಾಳೆಯವ ನೋಡ ।
ಲೆನುತ ನಡೆತಂದಿನನ ಬೇಹುಕಾರರೊ ಪೇಳ ।
ವನಿವಳಯುಮಂ ಪರಕಲಿಸಿ ಪಬ್ಬಿದ ಚಂದ್ರಿಕಾ[1]ಲತಿಕೆ ತಾಂ[1] ಹೂತುದೋ ॥
ತನತನಗೆ ಗೃಹಗೃಹಂಗಳ ಲಕ್ಷ್ಮಿಯರುಗಳೀ ।
ಶನು ಬರಲು ಪಿಡಿದ ನೀರಾರತಿಗಳೋ ಎನಲ್ । ಮುಪ್ಪು ॥೬॥
ದೆಸಲರಮನೆಯ [2]ಗೋಪವನಿತೆಯರುಗಳ ಸಾಲುಮನೆಯ ಸೊಡರುಗಳೆಸೆ

ಟೀಕು—ಕೇಳಿರೈ, ಎಲೈ ಮುನಿಗಳಿರಾ! ಆ ಪರಮೇಶ್ವರನು ಪುರುಷೋತ್ತಮನ ಅಂತಃಪುರದಲ್ಲಿ ಸಾಲುಮನೆಗಳ ಮುಂಗಡೆಯಲ್ಲಿ ಹೊತ್ತಿಸಿದ ದೀಪಂಗಳು ಆವ ಪ್ರಕಾರದಲ್ಲಿ ಒಪ್ಪಿದುವು? ಎಂದರೆ—ಘನತಿಮಿರರಾಜನೆಂಬನ ಪಾಳೆಯವ ನೋಡಲೆಂದೆನುತ ನಡೆತಂದ ಸೂರ್ಯನ ಕಿರಣಗಳೆಂಬ ಬೇಹುಕಾರರೋ ಎಂಬ ಹಾಗೆ ಇದ್ದುವು. ಮೇಣು = ಅದು ಅಲ್ಲದೆ, ಅವನಿವಳಯುಮಂ ಪರಕಲಿಸಿ = ಭೂಮಿಯ ಅಗಲದಲ್ಲಿ ಹಬ್ಬಿದ, ಚಂದ್ರಿಕಾಲತಿಕೆ ತಾಂ ಹೂತುದೋ = ಬೆಳುದಿಂಗಳೆಂಬ ಲತೆ ತಾನೆ ಪುಷ್ಪಂಗಳಾಯಿತೋ ಎಂಬ ಹಾಗೂ ಇದ್ದುವು. ತಮತಮಗೆ ಆಗೃಹಂಗಳಲ್ಲಿ ಇದ್ದ ಲಕ್ಷ್ಮಿಯರು ಶಿವನು ಬರಲಾಗಿ ಆರತಿಗಳಂ ಹಿಡಿದು ನಿಂದರೋ ಎಂಬ ಹಾಗೆ ಇದ್ದ ಆ ಅರಮನೆಯ ಗೋಪವನಿತೆಯರ ಸಾಲುಮನೆಗಳಲ್ಲಿ ಬೆಳಗುವ ದೀಪಂಗಳ ಸಮೂಹಂಗಳಂ ನೋಡುತ್ತ ಮಹಾದೇವನು ನಡೆತರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಪೌರಾಣಿಕನು ಪೇಳುತಿರ್ದನು.

ಗೋಪಾಲಕೃಷ್ಣನರಸಿಯರು ಷೋಡಶಸಹಸ್ರ ।
ಗೋಪಾಂಗನೆಯರ ಮನೆಮನೆಯ ಮುಂದೊಬ್ಬೊಬ್ಬ ।
ರಾಪಸೋತ್ತಮನಾಗ[3] ಭಿಕ್ಷವಂ ಬೇಡುತ್ತ ನೋಡುತಂ[3] ವಿಸ್ಮಯದೊಳು ॥

ಪಾ—1. ಲತಾ. ೪. 2. ಸೊಡರು ಕಗ್ಗನೆಯುಲಭವಂ ನೋಡ ತೃತರಲು ರಾಜಿಸಿದುವು.
3. ಭಿಕ್ಷಂ ಭಿಕ್ಷಾ ಎಂದು ಬೇಡುತಿರ.

ಅಪೊತ್ತು ತತ್ತದ್ಗೃಹಂಗಳೊಳಗೆಡೆವಿಡದೆ |
[1]ಶ್ರೀಪರಮಪುರುಷೋತ್ತಮಂ ಅವರವರಿಗಿಸಿತು[1] |
ರೂಪಾಗಿ ಸತಿಯರೊಳು [2]ವ್ಯಾಪಾರಿ[2]ಸುತ್ತಿರ್ದ ಬಗೆಯನೇವಣ್ಣಿಸುವೆನು ||

ಟೀಕು ಕೇಳಿರೈ, ಎಲೆ ಮುನಿಗಳಿರಾ! ಆಪರಮೇಶ್ವರನು ಆಅರಮನೆಯ ಹೊಕ್ಕು ಬಂದು, ಆಗೋಪಾಲಕೃಷ್ಣನರಸಿಯರು ಷೋಡಶಸಹಸ್ರ= ಆಗೋಪಾಲಕೃಷ್ಣನ ವರಸ್ತ್ರೀಯರು ಹದಿನಾಱುಸಾವಿರ, ಒಬ್ಬೊಬ್ಬ ಸ್ತ್ರೀಯರುಗಳಿಗೆ ಒಂದೊಂದು ಮನೆ, ಆಮನೆಮನೆಯ ಮುಂದೆ ಮನೆಮನೆದಪ್ಪದೆ ಒಬ್ಬೊಬ್ಬ ತಾಪಸೋತ್ತಮನಾಗಿ, ಭಿಕ್ಷವಂ ಬೇಡುತ್ತ, ವಿಶ್ವಮಯನಾದ ಶಿವನು ಶ್ರೀ ಕೃಷ್ಣನ ವಿನೋದವ ನೋಡುತ್ತ, ಗೃಹಗೃಹಂಗಳಲ್ಲಿ ನೋಡುವಲ್ಲಿ—ಆವಾಗಲೂ ಆಪುರುಷೋತ್ತಮನು ಹದಿನಾಱುಸಾವಿರ ಸ್ತ್ರೀಯರುಗಳ ಮನೆಗಳಲ್ಲಿಯೂ ಬೇಱೆ ಬೇಱೆ ರೂಪಾಗಿ ವ್ಯಾಪಾರಿಸುತಿದ್ದ ಬಗೆಯನು ಏನೆಂದು ಬಣ್ಣಿಸಲಿ ಮುನಿಗಳಿರಾ! ಎಂದು ಸೂತಮುನೀಶ್ವರನು ಪೇಳುತಿರ್ದಾನು.

ಒರ್ವರ್ಗಳೊಳ್ ಸಂಗೀತಮಂ ಕೇಳುತಿರ್ಪ ಮ |
ತ್ತೊರ್ವರ್ಗಳೊಳ್ ಸಾಹಿತ್ಯಗೋಷ್ಠಿಯಿಂದಿರುತಿರ್ಪ |
ನೊರ್ವರ್ಗಳೊಳ್ ಪೂರ್ವಪೂರ್ವಕಥಾಪ್ರಸಂಗಂಗಳಿಂ ಪೊತ್ತುಗಳೆಯುತಿರ್ಪಂ
ಒರ್ವರ್ಗಳೊಳ್ ಪೌರಾಣಮಂ ಪೇಳುತಿರ್ಪ ಬೞಿ |
ಕೊರ್ವರ್ಗಳೊಳ್ ನವ್ಯಕಾವ್ಯವನುಸಿರುತಿರ್ಪನಿಂ |
ತೊರ್ವರ್ಗಳೊಳಗಲ್ಲಿಗಲ್ಲಿಗೆ ಮೇಲುಮನೆಗಳೊಳಗಿರುತಿರ್ದನಾಕೃಷ್ಣನು ||೮||

ಟೀಕು—ಕೇಳಿರೈ, ಎಲೈ ಮುನಿಗಳಿರಾ! ಆ ಪರಮೇಶ್ವರನು ಹದಿನಾಱುಸಾವಿರ ಗೋಪಾಂಗನೆಯರ ಮನೆಯ ಮುಂದೆ ತಾನು ಹದಿನಾಱುಸಾವಿರ ರೂಪಿನಿಂದ ಭಿಕ್ಷಮಂ ಬೇಡುತ್ತ ನೋಡುವಲ್ಲಿ, ಆ ಪರಮಮೂರ್ತಿ ಶ್ರೀಕೃಷ್ಣನು ಗೋಪಿಯರುಗಳ ಕೂಡೆ ಆವ ಪ್ರಕಾರದ ವಿನೋದದಿಂದೊಪ್ಪಿದನು? ಎಂದರೆ—ಒರ್ವರ್ಗಳೊಳ್ ಸಂಗೀತಮಂ ಕೇಳುತಿರ್ಪ = ಒಬ್ಬಳ ಮನೆಯಲ್ಲಿ ದಿವ್ಯಗಾನವಂ ಹಾಡಿಸಿ ಕೇಳಿ ಪರಿಣಾಮಿಸುತ್ತಿರ್ಪ; ಮತ್ತೊರ್ವರ್ಗಳೊಳ್ ಸಾಹಿತ್ಯಗೋಷ್ಠಿಯಿಂದಿರುತಿರ್ಪ = ಮತ್ತೊರ್ವರ್ಗಳ ಕೂಡೆ ಶಬ್ದ ತರ್ಕ ಮೊದಲಾದ ಸಾಹಿತ್ಯಗೋಷ್ಠಿಯಿಂದಿರುತಿರ್ಪ; ಒರ್ವರ್ಗಳೊಳ್ ಪೂರ್ವಪೂರ್ವ ಕಥಾಪ್ರಸಂಗಂಗಳಿಂ = ಮತ್ತೊರ್ವರ್ಗಳ ಕೂಡೆ ಪೂರ್ವವಾದ ಕ್ಷೇಮೇಂದ್ರಿಯವೇ† ಮೊದಲಾದ ಪೂರ್ವ ಕಥೆಗಳಿಂ ಹೊತ್ತು

ಪಾ—1. ಶ್ರೀಪತಿ ಪುರುಷೋತ್ತಮನವರವರಿಗೆಸೆತನಿತು. 2. ವ್ಯವಹರಿ.

† ವ್ಯಾಖ್ಯಾನ = ಕ್ಷೇಮೇಂದ್ರನೆಂಬ ಕಾಶ್ಮೀರಖಂಡದ ಒಬ್ಬ ಪ್ರಾಚೀನನಾದ ಪ್ರಸಿದ್ಧಕವಿಯು ಮಾಡಿದ ಕಾವ್ಯಗಳು.

ಗಳೆಯುತಿರ್ಪ; ಮತ್ತೊರ್ವಳ ಕೂಡೆ ಪೌರಾಣಮಂ ಪೇಳುತಿರ್ಪ = ಸರ್ಗ, ಪ್ರತಿ ಸರ್ಗ, ವಂಶ, ಮನ್ವಂತರ, ವಂಶಾನುಚರಿತನೆಂಬ ಪುರಾಣಮಂ ಪಂಚಲಕ್ಷಣಗಳಿಂ ಒಬ್ಬಳೊಳು ಹೇಳುತಿರ್ಪ; ಒರ್ವಳೊಳ್ ನವ್ಯಕಾವ್ಯವನುಸಿರುತಿರ್ಪ = ಮತ್ತೊರ್ವಳೊಡನೆ ನವ್ಯಕಾವ್ಯ ರಸ ಗೀತಿ ಉಪಮೆ ಉತ್ಪ್ರೇಕ್ಷೆ ಮೊದಲಾದುವಂ ಹೇಳುತ್ತ, ಈ ಪ್ರಕಾರದಲ್ಲಿ ಮನೆಮನೆದಪ್ಪದೆ ಶ್ರೀಕೃಷ್ಣನು ಇರುತ್ತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತ್ತಿರ್ದಾನು.

ಭರತ ನಾಟಕ ಮದನಶಾಸ್ತ್ರ ಕವಿತಾರಚನೆ ।
ಪಿರಿದೆನಿಪ ಚೌಷಷ್ಟಿವಿದ್ಯಾಕಳಾಪ್ರೌಢಿ ।
ಸ್ವರಮಂಡಲಂ ರುದ್ರವೀಣೆ ಕಿನ್ನರಿ ಜಂತ್ರ ಚದುರಂಗ ನೆತ್ತ ಪಗಡೆ ॥
ಪರಿಪರಿಯ ಪೆಸರಿನಿಂದೆಸೆವ ನಾನಾ ಜೂಜು ।
ಧರೆಯೊಳಿವು ಮೊದಲಾದ ಸರಸಸಮ್ಮೇಳದಿಂ ।
ತರುಣಿಯರ ಮನೆಮನೆಯೊಳವರಿಚ್ಛೆಯಂ ಸಲಿಸುತಿರ್ದನಾಶ್ರೀಕೃಷ್ಣನು ॥೯॥

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಪುರುಷೋತ್ತಮನು ಒರ್ವಳಿಗೆ ಮಂಡಲದೃಷ್ಟಿ, ಹಾವ, ಭಾವ, ರೇಖೆ ಮೊದಲಾದ ಭರತಶಾಸ್ತ್ರವ ಹೇಳುತಿರ್ಪನು; ಮತ್ತೊರ್ವಳ ಕೂಡೆ ಶಾಕುಂತಳ, ಪ್ರಬೋಧ ಚಂದ್ರೋದಯ ಮೊದಲಾದ ನಾಟಕಶಾಸ್ತ್ರವ ಹೇಳುತಿರ್ಪನು; ಮತ್ತೊಬ್ಬಳ ಕೂಡೆ ನಾಯಕನಾಯಕೀಭೇದ, ಆಲಿಂಗನ, ಚುಂಬನ, ಬಂಧ, ರತಿ ಮೊದಲಾದ ಷೋಡಶಕಲೆಯಿಂದೊಪ್ಪುವ ಮದನಶಾಸ್ತ್ರವ ಹೇಳುವನು; ಮತ್ತೊಬ್ಬಳ ಕೂಡೆ ಛಂದಸ್ಸು, ಗಣನಿಯಮ, ರೀತಿ, ಪಾಕ, ದಶಪ್ರಾಣ ಮೊದಲಾದ ಕವಿರಚನೆಯನು ಹೇಳುವನು; ಮತ್ತೊಬ್ಬಳ ಕೂಡೆ ದೂರದೃಷ್ಟಿ, ದೂರಶ್ರವಣ, ಪರಕಾಯಪ್ರವೇಶ, ಅಂಜನಸಿದ್ಧಿ, ಘಟಿಕಾಸಿದ್ಧಿ, ಅಗ್ನಿಸ್ತಂಭನ ಮೊದಲಾದ ಚೌಷಷ್ಟಿವಿದ್ಯಾಕಲಾಪ್ರೌಢಿಯ ತೋಱುವನು; ಮತ್ತೊಬ್ಬಳೊಡನೆ ಸ್ವರಮಂಡಲವ ನುಡಿಸುವ; ಒಬ್ಬಳೊಡನೆ ರುದ್ರವೀಣೆಯ ಬಾಱಿಸುವ; ಒಬ್ಬಳೊಡನೆ ಕಿನ್ನರಿಯ ನುಡಿಸುವ; ಒಬ್ಬೊಳೊಡನೆ ಜಂತ್ರಪ್ರತಿಮೆಯ ನಾಡಿಸುವ; ಒಂದೆಡೆಯಲ್ಲಿ ಚದುರಂಗಗಳನಾಡುವ; ಒಬ್ಬಳೆಡೆಯಲ್ಲಿ ನೆತ್ತಗಳನಾಡುವ; ಒಬ್ಬಳೊಡನೆ ಪಗಡೆಗಳನಾಡುವ; ಉೞಿದ ಸತಿಯರೊಳಗೆ ನಾನಾ ತೆಱದ ಜೂಜು ಸರಸಸಮ್ಮೇಳನದಿಂದ ಇರುವ. ಈ ರೀತಿಯಲ್ಲಿ ತರುಣಿಯರ ಮನೆಮನೆಗಳಲ್ಲಿ ಅವರವರಿಚ್ಛೆಯ ಸಲಿಸುತ್ತ ಶ್ರೀಕೃಷ್ಣನು ಇರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಪೇಳುತಿರ್ದಾನು.

ನುಡಿಯ ಬಾರದ ಮುನಿಸು ನೋಡಬಾರದ ಕೋಪ ।
ವೊಡಗೂಡಬಾರದೆಂದೆಂಬ ಚಲವಿಡಿದೊರ್ವ ।
ಮಡದಿ ಗೋಪಾಲರಾಯನೊಳತಿಪ್ರಣಯಕಲಹದಿನಿರಲ್ಕಾಕ್ಷಣನಲ್ಲಿ ॥

ತಡೆಯುದಾಪತಿ ಸೀನಲೊಡನೆ ಹಱಸಲು ಮುನಿಸು |
ಕೆಡುಗೆಂದು ಕರ್ಣಪತ್ರವ ಮುಟ್ಟಿಯುಮೆಯು ನೆನೆ |
ಪೊಡೆ ಮೆಚ್ಚಿ ಕಾಲ್ಗೆಱಗಿ ತಿಳಿಪಿಯುವಳಂ ನೆರೆದನೊಂದೆಡೆಯೊಳಾಕೃಷ್ಣನು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತೊಂದೆಡೆಯಲ್ಲಿ ಒಬ್ಬ ಗೋಪಾಲಸ್ತ್ರೀಯು ಆವ ಪ್ರಕಾರದಲ್ಲಿ ಇದ್ದಳು? ಎಂದರೆ—ನುಡಿಯ ಬಾರದ ಮುನಿಸು = ನುಡಿದುದೇ ಉಂಟಾದರೆ ನಾಯಕನು ತಪಿಸನು ಎಂದು ಮಾತನಾಡದಿರುವ ಮುನಿಸು; ನೋಡಿದುದೇ ಉಂಟಾದರೆ ಈತನು ಸಮೀಪಕ್ಕೆ ಬಂದಾನು ಎಂದು ನೋಡಬಾರದ ಕೋಪ; ಸಮೀಪಕ್ಕೆ ಬಂದು ಒಳ್ಳಿತಾದ ಮಾತನಾಡಿದರೆ, ಇವನ ಕೂಡೆ ನುಡಿಯೆನು, ಇವನ ನೋಡೆನು, ಇವನೊಡಗೂಡಬಾರದು ಎಂದು ಛಲದಿಂದ ಒಬ್ಬ ಗೋಪಾಂಗನೆ ಪ್ರಣಯಕಲಹದಿಂದ ಗೋಪಾಲರಾಯನ ಕೂಡೆ ಮುನಿದಿರಲಾಕ್ಷಣದಲ್ಲಿ; ತಡೆಯುದಾಪತಿ ಸೀನೆ = ತನ್ನ ಪ್ರಾಣಕಾಂತನು ಅಷ್ಟಱೊಳಗೆ ಸೀನಲು; ಸೀನುತ್ತಲೆ ಹಱಸಿದುದೇ ಉಂಟಾದರೆ ತನ್ನ ಮುನಿಸು ಕೆಟ್ಟೀತು, ಎಂದು ಕರ್ಣಪತ್ರವ ಮುಟ್ಟಿ ಉಮೆಯ ನೆನೆಯಲು; ಪತಿಯು ಮೆಚ್ಚಿ = ಮಾತನಾಡದೆ ಹಱಸಿದ ಬಗೆಗೆ ಮೆಚ್ಚಿದನು. ಅದು ಹೇಗೆ? ಎಂದರೆ—ಪಾರ್ವತಿಯ ನೆನೆದು ತನ್ನ ಓಲೆಯ ಮುಟ್ಟಿಕೊಂಡ ಭಾವ—ಎಲೌ ದೇವಿಯರೇ! ನಿನ್ನ ಹಾಗೆ ಎನಗೆ ಮುತ್ತೈದೆತನವನು ಕೊಡು ಎಂಬ ಭಾವವು—ನಾಯಕನ ನಿತ್ಯನಾಗಿರು ಎಂದು ಹಱಸಿದಹಾಗಾಗಲಾಗಿ, ಮೆಚ್ಚಿ; ಅವಳ ಕಾಲ್ಗೆಱಗಿ, ಮುನಿಸ ತಿಳುಹಿ, ಆಲಿಂಗಿಸಿ, ಅವಳ ಕೂಡಿ, ಶ್ರೀಕೃಷ್ಣನು ಸುಖದಿಂದಿರುತಿದ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಪೇಳುತಿರ್ದಾನು.

ಒಂದೆಡೆಯೊಳೊರ್ವ ಗೋಪಾಲಸತಿ ಕುಳಿತು ಗೋ |
ವಿಂದನಂಗಪ್ರಭೆಯೊಳಗೆ ತನ್ನ ಕಂಡನ್ಯ |
ಳೆಂದು ರಮಣನೊಳು ಸೊಲ್ಲಿಸುವ ಸಲ್ಲಾಪಮಂ ಕೇಳಿ ಕಂಬನಿದುಂಬುತ ||
ನೊಂದ ಮಾನಿನಿಯ ಬಗೆಯಱಿದು ನಸುನಗುತ ಕರ |
ದಿಂದ ಬರಸೆಳೆದಪ್ಪಿ ತಿಳುಹಿ ನಾನಾ[1]ವಿನಯ |
ದಿಂದ ಮಸಗೊಳಿಸುತ್ತ ನೆರೆದು ಮನ್ನಿಸಿದನವನಂ ವಿದಗ್ಧರ ದೇವನೋ[1] ||

ಟೀಕು—ಕೇಳಿರೈ, ಎಲೈ ಮುನಿಗಳಿರಾ! ಮತ್ತೊಂದೆಡೆಯಲ್ಲಿ ಒರ್ವ ಗೋಪಾಂಗನೆ ತನ್ನ ಪ್ರಾಣಕಾಂತನಾದ ಗೋವಿಂದಸ್ವಾಮಿಯ ಸನ್ನಿಧಾನದಲ್ಲಿ ಕುಳಿತು ಅತಿಪ್ರೀತಿಯಿಂದ ನೋಡುವಲ್ಲಿ, ಆತನ ಹೊಳೆವ ಅಂಗಪ್ರಭೆಯಲ್ಲಿ ತನ್ನ ರೂಪು ಪ್ರತಿಬಿಂಬಿಸಲಾಗಿ, ಕಂಡು, ತನ್ನ ವಂಚಿಸಿ ಶರೀರದಲ್ಲಿ ಮತ್ತೊಬ್ಬಳನಿರಿಸಿಕೊಂಡಿದ್ದಾನೆ

---

ಪಾ—1. ಚಿತ್ರಬಂಧನಗಳನಱುಹಿ ಮುಗ್ಧೆಯ ನೆರೆದನು ಮಹಾನಂದದಿಂದಾಕೃಷ್ಣನು.

ಎಂದು ರಮಣನ ಕೂಡೆ ಆಡುತಿರ್ದ ಸರಸವಂ ಬಿಟ್ಟು ಕೋಪದಿಂದ ಕಂಬನಿದುಂಬಿ ದುಃಖಿತೆಯಾಗಲಾಗಿ ನೊಂದ ಮಾನಿನಿಯು ಬಗೆಯಱಿದು ನಸುನಗುತ, ಇವಳಿಗೆ ಅಂಗಚ್ಛಾಯೆ ಕಾಣಬಾರದು ಎಂದು ಬಲಸೆಳೆದಪ್ಪಿ, ಇಲ್ಲಿ ಆರೂ ಇಲ್ಲ ಎಂದು ತಿಳುಹಿ, ನಾನಾಪ್ರಕಾರವಾದ ವಿನಯದಿಂದ ಮುಗ್ಧೆಯಾಳ ಮುನಿಸ ತಿಳುಹಿ, ಅವಳ ನೆರೆದು, ವಿದಗ್ಧರ ದೇವನಾದ ನಾರಾಯಣಸ್ವಾಮಿ ಈ ಪ್ರಕಾರದಲ್ಲಿ ಒಪ್ಪಿದನು ಕಾಣಿರೈ, ಎಲೆ ಮುನಿಗಳಿರಾ ! ಎಂದು ಸೂತಮುನೀಶ್ವರನು ಪೇಳುತ್ತಿರ್ದಾನು.

ಬಳಿಕ ಮುಂದೊಂದು ಮಣಿಮಯದ ಗೃಹದೋಲಗದ |
ಲಲನೆಯರುಗಳಿಗೆಲ್ಲ ವೀಳೆಯಂಗುಡು[1]ತವರೊ |
ಳೆಲೆಯು[1] ಕೆಲಬರಿಗೆ ಮಿಗಿಲಾಗಿ ಕೆಲಬರಿಗೆಯತಿಪೂಗವುಂ ಮಿಶ್ರವಾಗಿ ||
ಕೆಲಬರಿಗೆ ಚೂರ್ಣವುಂ ಮಿಗಿಲಾಗಿ ಕೆಲಬರಿಗೆ |
ಯೆಲೆಯಡಕೆ ಚೂರ್ಣವುಂ ಸಮನಾಗಿ ಕುಡಲು ಗೋ |
ಪಾಲರಾಯನವನೀಶ್ವರಂನೋಡಿಮೆಚ್ಚಿದನವೇಂ ಜಾತಿಭಾವಜ್ಞನೋ ||೧೦||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಬಱಿಕ ಮತ್ತೊಂದು ಠಾವಿನಲ್ಲಿ ನವರತ್ನಖಚಿತವಾದ ಗೃಹಾಂತರದಲ್ಲಿ ಓಲಗದ ಸತಿಯರುಗಳಿಗೆ ಶ್ರೀಲಕ್ಷ್ಮೀಪತಿಯು ವೀಳೆಯಂಗಳಂ ಕುಡುವ ಸಮಯದಲ್ಲಿ—ಕೆಲಬರು ಸ್ತ್ರೀಯರುಗಳಿಗೆ ಎಲೆಯನೇ ಬಹಳವಾಗಿ ಕೊಟ್ಟು ಅಡಕೆ ಸುಣ್ಣವನು ಅಲ್ಪವಾಗಿ ಕೊಟ್ಟು, ಕೆಲವರಿಗೆ ಅಡಕೆಯನೇ ವಿಶೇಷವಾಗಿ ಕೊಟ್ಟು ಎಲೆ ಸುಣ್ಣಗಳ ಕಡಮೆಯಾಗಿ ಕೊಟ್ಟು, ಕೆಲಬರಿಗೆ ಸುಣ್ಣವ ವಿಶೇಷವಾಗಿ ಕೊಟ್ಟು ಅಡಕೆಯೆಲೆಯ ಕಡಮೆಯಾಗಿ ಕೊಟ್ಟು, ಕೆಲಬರಿಗೆ ಎಲೆಯಡಕೆ ಸುಣ್ಣವ ಸಮಾನವಾಗಿ ಕೊಟ್ಟು ಗೋಪಾಲರಾಯನಾದ ಶ್ರೀಕೃಷ್ಣನು ಈ ಪ್ರಕಾರದಲ್ಲಿ ವೀಳೆಯಂಗಳನು ಸ್ತ್ರೀಯರಿಗೆ ಕುಡುವುದನು ನೋಡಿ—ಈಶ್ವರನು ಮೆಚ್ಚಿದನು. ಶಿವನೇಂ ಭಾವಜ್ಞನೋ! ಎಂದು ನುಡಿವ ಚಾತುರ್ಯವೇನು? ಎಂದರೆ —ಎಲೆ ಬ್ರಹ್ಮನಿಗೆ ಪ್ರಿಯವಾದುದು ; ಅಡಕೆ ವಿಷ್ಣುವಿಗೆ ಪ್ರಿಯವಾದುದು ; ಸುಣ್ಣ ರುದ್ರನಿಗೆ ಪ್ರಿಯವಾದುದು. ಆದಱಿಂದ ಎಲೆಗೊಟ್ಟುದು ಬ್ರಹ್ಮಪ್ರಿಯವಾದುದಱಿಂದ ಆ ಬ್ರಹ್ಮನು ಶಾರದಾಪ್ರೀತನಾದ ಕಾರಣವಾಗಿ ಅವಳಿಗೆ ಸಂತಸವಂ ಮಾಡಿ, ಅಡಕೆಯು ವಿಷ್ಣುವಿಗೆ ಪ್ರಿಯವಾದುದಱಿಂದ ಲಕ್ಷ್ಮೀದೇವಿಯನು ಹೃದಯದೊಳಿಟ್ಟ ಮರ್ಯಾದೆಯಿಂದ ಅವಳಿಗೆ ಸಂತಸವಂ ಮಾಡಿ ; ಸುಣ್ಣವ ಕೊಟ್ಟವಳಿಗೆ ಶಿವನು ಅರ್ಧನಾರೀಶ್ವರನೆಂಬ ಭಾವದಿಂದ ಅವಳಿಗೆ ಸಂತಸವಂ ಮಾಡಿ ; ಅಡಕೆಯೆಲೆ ಸುಣ್ಣವ ಸಮವಾಗಿ ಕೊಟ್ಟ ಸ್ತ್ರೀಯರುಗಳಿಗೆ ರತಿತ್ರಯಂಗಳಿಂದ ನಿರ್ಮ್ಮೊಳು ನೆರೆದಪೆನೆಂಬ ಭಾವದಿಂದ ಆ ಸತಿಯರಿಗೆ ಸಂತಸಂಬಡಿಸಿ, ಎಲ್ಲರ ಚಿತ್ತಕ್ಕೂ ಕವಲು ಹುಟ್ಟದೆ

ಪಾ—1. ತಲವನೆಲೆಯು. 2. ಕೆಲಕೆಲಬರಿಗೆ ಪೂಗವುಂ.

ಪರಿಣಾಮಿಸುವ ಮರ್ಯಾದೆಯಲ್ಲಿ ದಕ್ಷಿಣಾಧೀಶ್ವರನಾದ (?) ನಾರಾಯಣಸ್ವಾಮಿ ಸ್ತ್ರೀಯರ ಮನ್ನಿಸುವುದ ಕಂಡು ಜಾತಿಭಾವಜ್ಞನಾದ ಶಿವನು ಮೆಚ್ಚಿ ನಗುತಿರ್ದನು ಕಾಣಿರೈ, ಎಲೆ ಮುನಿಗಳಿರಾ ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ತರುಣಿಯರು [1]ಮೂವರೇಕಾಸನದೊಳಿರಲಾಗಿ[1] |
ಪುರುಷೋತ್ತಮಂ ನಗುತ ಲೀಲಾವಿನೋದದಿಂ
ತರಳೆಯೊರ್ವಳ ಹಾರಮಂ ಹಱಿಯೆ ಬಿದ್ದ ಮಣಿಗಳನಱುಸುತಿರಲೊರ್ವಳಾ
ಸರಸನೆವದಿಂ ಕಣ್ಣ ಮುಚ್ಚುತುಂ ಮತ್ತೊರ್ವ |
ಸರಸಿಜಾಕ್ಷಿಯ ಕಳಾಧರವ ಚುಂಬಿಸಿ [2]ಮನವ || [ದನು ||೧೩||
ಹರುಷವೆಯ್ದಿಸಿ[2] ತನ್ನ ಧೂರ್ತನಾಯಕನಾದ ಪರಿಯನವರೊಳು ಮೆಱೆ[3]
†ಟೀಕು—. . . . . . . . . . . . . . . . . .

ಸಂವತ್ಸರಾವೇಶಿಯಾದ ಗೋಪಾಂಗನೆಯು |
ಸಂವತ್ಸರವ ನೋಡಿ ಸಂವತ್ಸರವನಱಿದು |
ಸಂವತ್ಸರಾರಿ ನೆರೆಯುಲ್ಕೆ ಸಂವತ್ಸರೆಯುದಾಗಿ ಸಂವತ್ಸರದಲಿ ||
ಸಂವತ್ಸರದ ವೀಣೆಯುಂ [3]ಗೀತಜಾತಿಯಿಂ[3] |
ಸಂವತ್ಸರವನುಂಟುಮಾಡಿ ನುಡಿಸುತ ಪಾಡಿ |
ಸಂವತ್ಸರನ ಜಡೆದುಱುಬಿನ ಸಂವತ್ಸರೇಶ್ವರನ ಲಾಂಛನವ ಸೆಳೆಕೊಂಡಳು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತೊಂದೆಡೆಯಲ್ಲಿ ಆ ದೇವಕೀನಂದನನಾದ ಶ್ರೀಗೋಪಾಲಕೃಷ್ಣನು ಸಂವತ್ಸರಾವೇಶಿಯಾದ ಗೋಪಾಂಗನೆಯು= ಸಂವತ್ಸರವೆಂದರೆ—ಮನ್ಮಥಸಂವತ್ಸರ, ಮನ್ಮಥಾವೇಶಿಯಾದ ಗೋಪಾಂಗನೆಯು ; ಸಂವತ್ಸರವ ನೋಡಿ= ಸಂವತ್ಸರವೆಂದರೆ ಶ್ರೀಮುಖ, ಅವಳ ಮುಖವ ನೋಡಿ ; ಸಂವತ್ಸರವನಱಿದು= ಸಂವತ್ಸರವೆಂದರೆ ಭಾವಸಂವತ್ಸರ, ಅವಳ ಭಾವವನಱಿದು ; ಸಂವತ್ಸರಾರಿ= ಸಂವತ್ಸರವೆಂದರೆ ರಾಕ್ಷಸಸಂವತ್ಸರ, ರಾಕ್ಷಸರುಗಳಿಗೆ, ಅರಿ–ವೈರಿಯಾದ ಶ್ರೀಕೃಷ್ಣನು ; ನೆರೆಯುಲ್ಕೆ ; ಸಂವತ್ಸರೆಯುದಾಗಿ= ಸಂವತ್ಸರವೆಂದರೆ ಶುಕ್ಲಸಂವತ್ಸರವನುಳ್ಳವಳಾಗಿ; ಸಂವತ್ಸರದಲಿ= ಸಂವತ್ಸರವೆಂದರೆ ಆನಂದಸಂವತ್ಸರ,

---

ಪಾ—1. ಮೂವರೊಂದೇಮನೆಯೊಳಿರುತಿರಲು.

2. ಮನೋಹರುಷವೇದಿಸಿ ತನ್ನ ಧೂರ್ತನವಮಾಡಿ ನುಡಿದ . . . .

3. ಗೀತಜಾಣ್ಮೆಯುಂ.

†ಈ ಪದ್ಯದ ವ್ಯಾಖ್ಯಾನವು ಎರಡುಪ್ರತಿಯಲ್ಲಿಯೂ ಪಾತವಾಗಿದೆ. ಪದ್ಯಾಭಿಪ್ರಾಯು ಸ್ಪಷ್ಟ.

ಆನಂದದಲ್ಲಿ; ಸಂವತ್ಸರದ ವೀಣೆಯಿಂ = ಸಂವತ್ಸರವೆಂದರೆ ರೌದ್ರಿಸಂವತ್ಸರ, ರುದ್ರ ವೀಣೆಯುಂ ಬಾರಿಸುತ್ತ; ಗೀತಜಾತಿಗಳಿಂದ ಸಂವತ್ಸರವನುಂಟುಮಾಡಿ = ಸಂವತ್ಸರವೆಂದರೆ ಸಿದ್ಧಾರ್ಥಿಸಂವತ್ಸರ, ಆಗೀತಂಗಳಲ್ಲಿ ಇದ್ದ ಸಿದ್ಧವಾದ ಅರ್ಥಂಗಳನುಂಟುಮಾಡಿ; ನುಡಿಪಾಡಿ; ಸಂವತ್ಸರನ ಜಡೆದುಱುಬಿನ = ಸಂವತ್ಸರವೆಂದರೆ ಈಶ್ವರ ಸಂವತ್ಸರ, ಆ ಈಶ್ವರನ ಜಡೆದುಱುಬಿನ; ಸಂವತ್ಸರೇಶ್ವರನ = ಸಂವತ್ಸರವೆಂದರೆ ಶಾರ್ವರಿ ಸಂವತ್ಸರ, ಶಾರ್ವರೀಶ್ವರನಾದ ಚಂದ್ರನ; ಲಾಂಛನವ ಸೆಳೆಕೊಂಡಳು = ಆ ನಾರಾಯಣಸ್ವಾಮಿಯು ಕರಾಗ್ರದಿಂದ ಹುಟ್ಟಿದ ನಖಕ್ಷತವೆಂಬ ಚಂದ್ರನ ಸೆಳೆಕೊಂಡಳು. [ಇಂತು] ಕಲೆಯಿಂದಾದವೊಪ್ಪುವ ಸ್ತ್ರೀಯೊಡನೆ ನಾರಾಯಣಸ್ವಾಮಿ ಸುಖಿಸುತ್ತ ಒಪ್ಪಿದನು ಎಂದು ಸೂತಮುನೀಶ್ವರನು ಹೇಳುತ್ತಿದ್ದರ್ನು.

. . . . . . . . . . . .ಶ್ರಮವ ನಿವಾರಿಸುವೆನೆಂದೊರ್ವ |
ತರುಣಿ ಮನೆಯಿಂದ ಪೊಱಮಟ್ಟು ಬಾಗಿಲೊಳು ನಿಂ |
ದಿರಲೊಡನೆಯುಪವನದ²ತುಳಿರ್ವಾತಿಳಿಗೊಳನತ್ತಣಿಂ³ದಲರ್ದಕೈರವಗಳ ||
ಪರಿಮಳವ ³ಸತ್ಕರಿಸಿ³ ಶೈತ್ಯಸೌರಭ್ಯನೈ |
ತರುತ ಮಾರುತನೆಂಬ ಚೋರನದೃಶ್ಯಕರಣ |         |ಯ್ದನು || ೧೫ ||
ವೆರಸಿ ಬಂದವಳ ⁴ಬೆಮರೆಂಬ ಮುತ್ತಿನ ತೊಡಿಗೆಯಂ⁴ ಪರಿದುಕೊಂಡು

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಒಂದೆಡೆಯಲ್ಲಿ ಒಬ್ಬ ಗೋಪಾಲಸ್ತ್ರೀಯು ತನ್ನ ಒಱಲಿಕೆಯ ಪರಿಹರಿಸಿಕೊಂಬೆನೆಂದು ಮನೆಯ ಪೊಱಮಟ್ಟು ಬಾಗಿಲ ಮುಂದೆ ನಿಂದಿರಲೊಡನೆ ಉಪವನದತ್ತಣಿಂದ ತಿಳಿಗೊಳನಲ್ಲಿ ಶೈತ್ಯಮಂ ತುಂಬಿಕೊಂಡು, ಅಲರ್ದ ಕಮಲಕೈರವಂಗಳಲ್ಲಿ ಪರಿಮಳವ ಸತ್ಕರಿಸಿಕೊಂಡು, ಶೈತ್ಯಸೌರಭ್ಯಗಳನು ಕದ್ದು ಹೊತ್ತು ನಡೆಯುಲಾಱದ ಮಂದ ಮಾರುತನೆಂಬ ಚೋರನು ಅದೃಶ್ಯಕರಣದಿಂದ ಬಂದು, ನಾಯಕಿಯ ಬೆಮರೆಂಬ ಮುತ್ತಿನ ಹಾರವ ಹಱಿದು ಕೊಂಡು ಹೋದನೋ ಎಂಬ ಮರ್ಯಾದೆಯಿಂದ ಮಂದ ಮಾರುತವು ತೀಡಿತು ಕಾಣಿರೈ, ಎಲೈ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿದ್ದರ್ನು.

. ನೋಟದಿಂ ನೋಡಿ ಕೆಲಬರಂ ಮರುಳ್ಮಾಡುತುಂ |
ಜೋಟವಂ ಬೀಱಿ ಕೆಲಬರ ಕಾಡಿ ನೋಡುತುಂ
ಕೂಟದ ಕಲಾಪ್ರೌಢಿಯಿಂದೆ ಕೆಲಕೆಲಬರಂ ಸುಖದೊಳೋಲಾಡಿಸುತ್ತುಂ ||

---

ಪಾ—2. ಸರಸಿಯ ಪೊರೆಯ ತಂಪಿನಿಂ. 3. ತಸ್ಕರದಿ.
4. ಪೆಯ್ಮೆಮರ್ವನಿವು ಮುತ್ತರೊಡವಂ.

ಆಟದಿಂ ಕೆಲಕೆಲಗಿರಿಗಿಂಪ ಸೈಗಱೆಯುತುಂ |
ಪಾಠದಿಂ ಕೆಲರಿಗಚ್ಚುಯನೀಯುತುಂ ಕಪಟ |
ನಾಟಕಂ ಮನೆಮನೆಯೊಳಿರೆ ಪ್ರೊಱಗೆ ವಿಶ್ವನಟನಾಟಕಂ ದನಿದೋಱಿದಂ ||

ಟೀಕು— ಕೇಳಿರೈ, ಎಲೆ ಮುನಿಗಳಿರಾ! ಆ ಗೋಪಾಲಕೃಷ್ಣ ತನ್ನ ಅರಮನೆಯಲ್ಲಿ ಹದಿನಾಱುಸಾವಿರ ಮಂದಿ ಗೋಪಸ್ತ್ರೀಯರನ್ನು, ನೋಟದಿಂದ ಕೆಲಬರಂ ಮರುಳ್ಮಾಡುತುಂ= ನೋಟದ ಮಾತ್ರದಲ್ಲೇ ಕೆಲವರನ್ನು ವಶೀಕರಣವ ಮಾಡುತ್ತ, ಕಿವಿವೇಟ ನುಡಿವೇಟದಿಂದ ಕೆಲ ಸತಿಯರ ಕಾಡಿ ನೋಡುತ್ತ, ಕೂಟದ ಕಲಾಪ್ರೌಢಿಯಿಂದ ಕೆಲ ಸತಿಯರ್ಗೆ ಸುರತಸುಖಸಂಪತ್ತಿನಲ್ಲಿ ಓಲಾಡಿಸುತ್ತ, ನೆತ್ತ ಪಗಡೆ ಚದುರಂಗ ಮೊದಲಾದ ಆಟಗಳಿಂದ ಕೆಲ ಸತಿಯರ್ಗೆ ಸವಿಗಱೆಯುತ್ತ, ಓದು ಹಾಡು ಮೊದಲಾದ ನಾನಾಪ್ರಕಾರವಾದ ವಿನೋದಗಳಿಂದ ಆಶೆಯನೀಯುತ್ತ, ಕಪಟನಾಟಕನಾದ ಗೋಪಾಲಕೃಷ್ಣನು ಈ ಪ್ರಕಾರದಲ್ಲಿ ಮನೆಮನೆದಪ್ಪದೆ ಎಲ್ಲಿ ನೋಡಿದರೂ ತಾನೇ ಇರುತ್ತಿರಲಾಗಿ, ವಿಶ್ವನಾಟಕನಾದ ಮಹಾದೇವನು ಆ ಮನೆಗಳ ಮುಂದೆ ಧ್ವನಿದೋಱಿದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಶಿವಗೆ ಭಿಕ್ಷಂ ಸದಾಚಾರಭಿಕ್ಷಂ ಸದಾ |
ಶಿವಗೆ ಭಿಕ್ಷಂ ವಿಚಾರದ ಸುವರ್ತನೆಯು ಶಂ |
ಭುವಿಗೆ ಭಿಕ್ಷಂ ವಿಚಾರದವಿಚಾರಖರ್ಪರವ ಪಿಡಿದಜಾತಂಗೆ ಭಿಕ್ಷ ||
ಭವಗೇಡಿಯಾಗಿ ಬಯಸದೆ ಬಂದ ಭಿಕ್ಷಮಂ |
ಸವಿದು ಚರಿಪವಧೂತ ಬಂದು ಭಿಕ್ಷಾ ಎಂದ |
ಭವನು ಶ್ರೀಕೃಷ್ಣನರಮನೆಯೊಳಗೆ ಭಿಕ್ಷಾಧ್ವನಿಯನುಚ್ಚರಿಸುತಿರ್ದನು||೧೩

ಟೀಕು— ಕೇಳಿರೈ, ಎಲೆ ಮುನಿಗಳಿರಾ! ವಿಶ್ವನಾಟಕನಾದ ಮಹಾದೇವನು ಮನೆಮನೆಯ ಮುಂದೆ ನಿಂತು ಧ್ವನಿದೋಱುತಿರ್ದನು. 'ಶಿವಗೆ ಭಿಕ್ಷಂ= ಮಂಗಳಾತ್ಮನಿಗೆ ಭಿಕ್ಷ; ಸದಾಚಾರಭಿಕ್ಷಂ= ಆ ಸದಾಶಿವಗೆ ಭಿಕ್ಷ; ಸದಾಚಾರಭಿಕ್ಷವ ಕೈಕೊಂಬ ಪಾರ್ವತೀಕಾಂತಂಗೆ ಭಿಕ್ಷ; ವಿಚಾರದ ಸುವರ್ತನೆಯು ಶಂಭುವಿಗೆ ಭಿಕ್ಷ= ವಿಚಾರದೊಡನೆ ಕೂಡಿದ ಲೇಸಾದ ವರ್ತನೆಗೆ ಆಶ್ರಯವಾದ ಸುಖದಿಂದ ಆಕಾರವಂ ಪಡೆದ ಪರಮಾತ್ಮಂಗೆ ಭಿಕ್ಷ; ಅವಿಚಾರತತ್ವದ ಖರ್ಪರವ ಪಿಡಿದ= ಹುಟ್ಟದೆ ಇದ್ದಾತಂಗೆ ಭಿಕ್ಷ; ಭವಗೇಡಿಯಾಗಿ ಬಯಸದೆ ಬಂದ ಭಿಕ್ಷಮಂ ಸವಿದು, ಚರಿಪವಧೂತ ಬಂದು, ಜನರಲ್ಲಿ ಬಾರದೆ ಬಯಸದೆ ಬಂದ ಪದಾರ್ಥವ ಸವಿದು ಚರಿಸುತ್ತ, ಸುಕರ್ಮದುಷ್ಕರ್ಮಗಳನ್ನು ಕೊಟ್ಟಾತನು ಬಂದು ಭಿಕ್ಷೆಯೆಂದು

ಉದಾತ್ತಸ್ವರದಿಂದ ಆಭವನು ಭಿಕ್ಷಾ ಎಂಬ ಶಬ್ದದಿಂದ ಶ್ರೀಕೃಷ್ಣನ ಅರಮನೆಯೊಳಗೆ ದನಿದೋರಿದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ಮನೆಮನೆಯ ಮುಂದೆ ಭಿಕ್ಷಾ ಎಂಬ ಶಬ್ದ ಸಂ ।
ಜನಿಸೆಯದ ಕೇಳಿ ತವಸಿಗಳು ಬಿಜಯಂಗೆಯ್ದ ।
ರೆನುತ ಭಕ್ತಿಯಲಿ ಭಿಕ್ಷವ ನೀಡಲೆಂದು ತವುತವು[1]ಗಲ್ಲಿ ಸಂಭ್ರಮಿಸುತ ॥
ವನಜನೇತ್ರೆಯರು[1] ಕೈರವಸುನೇತ್ರೆಯರು ಕಾಂ ।
ಚನಕರ್ಣಪತ್ರೆಯರು ಮಾಂಗಲ್ಯಸೂತ್ರೆಯರು ।
ವಿನುತಗುಣಗಾತ್ರೆಯರು ಪಾವನಚರಿತ್ರೆಯರು ಗೃಹಗಳಂ ಪೊರಮಟ್ಟರು॥

ಟೀಕು— ಕೇಳಿರೈ, ಎಲೆ ಮುನಿಗಳಿರಾ! ಶಿವನು ಶ್ರೀ ಗೋಪಾಲಕೃಷ್ಣನ ಅಂತಃಪುರದಲ್ಲಿ ಮನೆಮನೆಗಳ ಮುಂದೆ ಭಿಕ್ಷಾ ಎಂಬ ಶಬ್ದವನೆ ಧ್ವನಿಮಾಡಲಾಗಿ, ಆ ಧ್ವನಿಯಂ ಕೇಳಿ ತಪಸ್ವಿಗಳು ಬಿಜಯಂಗೈದರೆನುತ್ತ, ಭಯಭರಿತಭಕ್ತಿಯಿಂದ ಭಿಕ್ಷವ ನೀಡಬೇಕೆಂದು ತಮುತಮಗೆ ಸಂಭ್ರಮಿಸುತ್ತ, ವನಜನೇತ್ರೆಯರು = ತಾವರೆಗೆ ಸಮಾನವಾದ ಮುಖವುಳ್ಳವರು ಕೆಲರು, ಕೈರವಸುನೇತ್ರೆಯರು = ಕನ್ನೈದಿಲೆಸಳುಗಳಿಗೆ ಸಮಾನವಾದ ಲೋಚನಗಳುಳ್ಳವರು ಕೆಲರು ; ಕಾಂಚನಕರ್ಣಪತ್ರೆಯರು = ಸುವರ್ಣಮಯವಾದ ಓಲೆಗಳುಳ್ಳವರು ಕೆಲರು ; ಮಾಂಗಲ್ಯಸೂತ್ರೆಯರು = ಕೊರಲಿನಲ್ಲಿ ಮಾಂಗಲ್ಯಸೂತ್ರವನುಳ್ಳವರು ಕೆಲರು ; ವಿನುತಗುಣಗಾತ್ರೆಯರು = ಎಲ್ಲರಿಂದಲೂ ಕೊಂಡಾಡಿಸಿಕೊಂಬುದಕ್ಕೆ ಯೋಗ್ಯವಾದ ಶರೀರವನುಳ್ಳವರು ಕೆಲರು ; ಪಾವನಚರಿತ್ರೆಯರು = ಪವಿತ್ರಗಾತ್ರೆಯರಾದ ಗೋಪಾಂಗನೆಯರು—ಭಿಕ್ಷವನೀಡಲೆಂದು ಮನೆಮನೆಗಳಿಂದ ಹೊರಟರು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ನಾರಿಯರು ಸುಪತಿವ್ರತಾಗುಣವ ಸಹಜಸ್ಥ್ಯಂ ।
ಗಾರಿಯರು ಲಾವಣ್ಯರಸಭರಿತಮನೋಹರಾ ।
ಕಾರೆಯರು ಶುಭಲಕ್ಷಣಂದಳೆದ ಕೀರ್ತಿವಿಸ್ತಾರೆಯರು ಕಂಗೊಳಿಸುವ ॥
ನಾರಿಯರು ಸತ್ಸಥವಿಹಾರೆಯರು ನಿರ್ಮಲಶ ।
ರೀರೆಯರು ನಿತ್ಯಸುವಿಚಾರೆಯರು ನೆರೆ ಸದಾ ।
ಚಾರೆಯರು ಪರಮಸಂಸ್ಕಾರೆಯರು ಕೃಷ್ಣಸಂಸಾರೆಯರು ಬರುತಿರ್ದರು॥

---

ಪಾ—1. ಗಲ್ಲ ಸಂಭ್ರಮಿಸುತಾವನಜವಕ್ತ್ರೆಯರು.

ಟೀಕು- ಕೇಳಿರೈ, ಎಲೆ ಮುನಿಗಳಿರಾ! ಆಶಿವನು ಭಿಕ್ಷಾ ಎಂದ ಧ್ವನಿಯು ಕೇಳಿ ಈ ಪ್ರಕಾರವಾದ ಗೋಪಾಂಗನೆಯರು ಬರುತ್ತಿರ್ದರು ಎಂದು ಹೇಳುತಿರ್ದಾನು. ಅವರು ಎಂಥವರು? ಎಂದರೆ—ನಾರಿಯರು = ಕಬ್ಬುವಿಲ್ಲಿನ ನಾರಿಯೋಪಾದಿಯಲ್ಲಿ ಪುರುಷರ ಮನವೆಂಬ ಬಿಲ್ಲ ಬಾಗಿಸುವ ನಾರಿಯರು; ಸುಪತಿವ್ರತಾಗುಣದ ಸಹಜಶೃಂಗಾರಿಯರು = ಪತಿವ್ರತಾಗುಣವೇ ದಿವ್ಯಾಭರಣಂಗಳಾಗಿ ಉಳ್ಳವರು; ಲಾವಣ್ಯರಸಭರಿತಮೋಹನಾಕಾರೆಯರು = ತನುಕಾಂತಿಯಿಂದ ತುಂಬಲ್ಪಟ್ಟ ಮೋಹನವೇ ಆಕಾರವಾದವರು; ಶುಭಲಕ್ಷಣಂದಳೆದ ಕೀರ್ತಿವಿಸ್ತಾರೆಯರು = ಸುಲಕ್ಷಣದೊಡನೆ ಕೂಡಿದ ಪುಣ್ಯಕೀರ್ತಿಯನು ಪ್ರಕಟಿಸುವರು; ಕಂಗೊಳಿಪ ನಾರಿಯರು = ಹದಿನೆಂಟು ಲಕ್ಷಣಗಳಲ್ಲಿ ಕೊಂಕುಕೊರತೆಯಿಲ್ಲದೆ ನೆರವಾದವರು; ಸತ್ಪಥವಿಹಾರೆಯರು = ಶಾಸ್ತ್ರಂಗಳಲ್ಲಿ ಹೇಳಲ್ಪಟ್ಟ ಸತ್ಕೀರ್ತಿಮಾರ್ಗದಲ್ಲಿ ಆಚರಿಸುವರು; ನಿರ್ಮಲಶರೀರೆಯರು = ಕಂದುಕಳಂಕಿಲ್ಲದೆ ಇದ್ದ ನಿರ್ಮಲಶರೀರವುಳ್ಳವರು; ನಿತ್ಯಸುವಿಚಾರೆಯರು = ಆವಾಗಲೂ ಅಜ್ಞಾನಕೃತವಲ್ಲದೆ ಮೇಲನರಿದು ವಿಚಾರಿಸಿ ನಡೆವರು; ನೆರೆಸದಾಚಾರೆಯರು = ನಿತ್ಯ ನೈಮಿತ್ತಿಕಕಾರ್ಯಂಗಳೆಂಬ ಸದಾಚಾರದಲ್ಲಿ ನಡೆವರು; ಪರಮಸಂಸ್ಕಾರಿಯರು = ಪೂರ್ವಜನ್ಮಕೃತವಾದ ಪಾಪವಿಲ್ಲದೆ ಪುಣ್ಯಸಂಸ್ಕಾರವನುಳ್ಳವರು; ಕೃಷ್ಣಸಂಸಾರಿಯರು = ಆನಾರಾಯಣಂಗೆ ಸಂಸಾರಿಯಾದ ಗೋಪಾಲಸ್ತ್ರೀಯರು ಈಶ್ವರಗೆ ಭಿಕ್ಷವ ನೀಡಲೆಂದು ಬರುತಿದ್ದರು ಕಾಣಿರೈ, ಮುನಿಗಳಿರಾ! ಎಂದು ಸೂತಪೌರಾಣಿಕನು ಹೇಳುತಿರ್ದಾನು.

ಕುಂಭಕುಚವೆಂಬ ಕಳಶಂಗಳಿಂ ಪೊಳೆವಧರ
ವೆಂಬ ಪಲ್ಲವಗಳಿಂ ತೊಳತೊಳಪ ನುಣ್ಗಲ್ಲ
ವೆಂಬ ದರ್ಪಣಗಳಿಂ ಪುಳಕಾಂಕುರಂಗಳೆಂಬ ಶೇಷಾಕ್ಷತೆಗಳಿಂ ॥
ಬೆಂಬಳಿಯ ನೂಪುರಧ್ವನಿಯೆಂಬ ವಾದ್ಯಂಗ ।
ಳಿಂ ಭಕ್ತಿಯೆಂಬ ಸುಮನೋರಾಗದಿಂ ನಯನ ।
ವೆಂಬ ದೀಪಂಗಳಿಂ ಗೋಪಸತಿಯರು ನಡೆನು ಶಂಭುವನಿದಿರ್ಗೊಂಡರು ॥

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಈಶ್ವರಂಗೆ ಆ ಗೋಪಾಂಗನೆಯರು ಭಿಕ್ಷವ ನೀಡಲೆಂದು ಬರುವಲ್ಲಿ ಈಶ್ವರನನಿದಿರ್ಗೊಂಬ ಸಂಭ್ರಮವೋ ಎಂಬಹಾಗೆ ತೋರುತಿರ್ದರು. ಅದು ಹೇಗೆಂದರೆ:-ಕುಂಭಕುಚವೆಂಬ ಕಳಶಂಗಳಿಂ = ಸುವರ್ಣಕಲಶಂಗಳಿಗೆ ಸಮಾನವಾದ ಕುಚಂಗಳೆಂಬ ಲಾವಣ್ಯರಸ ತೀವಿದ ಪೂರ್ಣಕಳಶಂಗಳಿಂದ; ಪೊಳೆವಧರವೆಂಬ ಪಲ್ಲವಗಳಿಂ = ಕಾಂತಿಮುತ್ತಾದ ಚೆಂದುಟಿಯೆಂಬ ಕೆಂಪಾದ ಎಳದಳಿರ್ಗಳಿಂದ; ತೊಳಪ ನುಣ್ಗಲ್ಲವೆಂಬ ದರ್ಪಣಗಳಿಂದ = ಕಾಂತಿವೆತ್ತು ನುಣ್ಪುವೆತ್ತ ಕದಪುಗಳೆಂಬ ಕನ್ನಡಿಗಳಿಂದ; ಪುಳಕಾಂಕುರಂಗಳೆಂದೆಂಬ ಶೇಷಾಕ್ಷತೆಗಳಿಂ = (ಕಿಱುಬೆಮರೆಂಬ ತಳಿದ ಅಕ್ಷತೆಗಳಿಂದ) ಬೆಂಬಳಿಯ ನೂಪುರಧ್ವನಿಯೆಂಬ ವಾದ್ಯಂ

ಗಳಿಂ=ಬಿಡದೆ ಧ್ವನಿಮಾಡುತಿರ್ದ ಅಂದುಗೆ ನೂಪುರ ಮೊದಲಾದ ಆಭರಣಂಗಳ ಧ್ವನಿಗಳೆಂಬ ವಾದ್ಯಂಗಳಿಂದ; ಸುಮನೋರಾಗದಿಂ=(ಒಳ್ಳೆಯ ಮನಸ್ಸೆಂಬ ಕೆಂಪಾದ ಓಕುಳಿಯಿಂದ); ನಯನವೆಂಬ ದೀಪಂಗಳಿಂ=ಕಣ್ಣುಗಳೆಂಬ ದೀಪಗಳಿಂ ಒಪ್ಪುತಿರಲಾಗಿ- ಗೋಪಸತಿಯರು ಶಂಭುವೆಂಬ ಮಹಾದೇವನ ಕಳಸ ಕನ್ನಡಿ ವಾದ್ಯ ಮೊದಲಾದ ಮಂಗಳೋತ್ಸವದಿಂದ ಎದುರುಗೊಂಡರು ಎಂಬ ಮರ್ಯಾದೆಯಲ್ಲಿ ಗೋಪಾಂಗನೆಯರ್ಗಳು ಒಪ್ಪಿದರು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಪೇಳುತಿರ್ದನು.

ಹರಿಯುಂ ವನಕ್ರೀಡೆಗುಯ್ದು ಕೀರ್ತಿಸಿ ಚೂತ |
ತರುವಂ ನುಡಿದು ಕರ್ಣಿಕಾರವನಪ್ಪುತುಂ |
ಕುರವಕವ ಕುಡಿನೋಟದಿಂ ಪ್ರಿಯಂಗುವನೂದಿ ಲೊಕ್ಕಿಯುಂ ಸಂಗೀತದಿಂ ||
ಸುರಹೊನ್ನೆಯುಮನುಗುಳ್ದು ಬಕುಳಮಂ ಕಣ್ಬೆಳಗ |
ಪರಿಹಿ ತಿಲಕವ ನಗುತ ಮಲ್ಲಿಗೆಯನೊದೆದಶೋಕೆಯ
ಮರನ ಪ್ರೌಢೆಯರ್ ಸತಿಯರು ಸ್ಥಾಣುವಿಗೆ ಭಿಕ್ಷವನೀಯಲೈತಂದರು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಈಶ್ವರಂಗೆ ಭಿಕ್ಷವ ನೀಡಲೆಂದು ಬಂದಾಸ್ತ್ರೀಯರುಗಳು ಆವ ಪ್ರಕಾರದ ಸಾಮರ್ಥ್ಯವನುಳ್ಳವರು? ಎಂದರೆ—ಹರಿಯುಂ ವನಕ್ರೀಡೆಗುಯ್ದು=ಶ್ರೀ ಕೃಷ್ಣಸ್ವಾಮಿಯು ವನಕ್ರೀಡೆಗೆಂದು ಉದ್ಯಾನವನಕ್ಕೆ ಕರೆತಂದು, ಆತನ ಮುಂದೆ ತಮ್ಮ ಸಮರ್ಥತೆಯಂ ತೋರುವುದಕ್ಕೆ, ಕೀರ್ತಿಸಿ ಚೂತತರುವಂ=ಕೊಂಡಾಡಿ ಮಾವಿನ ಮರದಲ್ಲಿ ಅಂಕುರವಂ ಪುಟ್ಟಿಸುತ್ತ; ನುಡಿದು ಕರ್ಣಿಕಾರವ=ಬೆಟ್ಟದಾವರೆಯಲ್ಲಿ ಸವಿವಾತನಾಡಿ ಪುಷ್ಪವಂ ತೋರುತ್ತ; ಅಪ್ಪುತುಂ ಕುರವಕವ=ಕೇರಣವನಪ್ಪಿ ತಳಿರಾಗಿಸುತ್ತ; ಕುಡಿನೋಟದಿಂ ಪ್ರಿಯಂಗುವ= ನೋಟದಿಂದಾಪ್ರಿಯಂಗುವೃಕ್ಷದಲ್ಲಿ ಚಿಗುರ ತೋರುತ್ತ; ಊದಿ ಲೊಕ್ಕಿಯುಂ=ಉಚ್ಛ್ವಾಸದಿಂದ ಲೊಕ್ಕಿಯಲ್ಲಿ ಹೂವ ತಂದು; ಸಂಗೀತದಿಂ ಸುರಹೊನ್ನೆಯುಂ=ಹಾಡಿ ಸುರಹೊನ್ನೆಯಲ್ಲಿ ಅರಳುಗಳ ತೋರುತ್ತ; ಉಗುಳ್ದು ಬಕುಳಮಂ=ಗಂಡೂಷದಿಂದ ಬಕುಳವ ಪಲ್ಲವಿಸುತ್ತ; ಕಣ್ಬೆಳಗ ಪರಿಹಿ ತಿಲಕವ=ನೋಟದಿಂದ ತಿಲಕವ ಹೆಚ್ಚಿಸುತ್ತ; ನಗುತ ಮಲ್ಲಿಗೆಯ=ನಗೆಯಿಂದ ಮಲ್ಲಿಗೆಯಲ್ಲಿ ಪುಷ್ಪವಂ ತೋರುತ್ತ; ಒದೆದಶೋಕೆಯ=ಅಶೋಕೆಯನ್ನೊದೆದು ತಳಿರ ತೋರುತ್ತ;—ಈ ಪ್ರಕಾರವಾದ ಸಾಮರ್ಥ್ಯವನ್ನು ತಮ್ಮ ವರನಾದ ಪುರುಷೋತ್ತಮನೆಡೆಗೆ ತೋರಿದ ಶೃಂಗಾರವಡೆದ ಸತಿಯರೆಲ್ಲಾ ಶಿವನೆಡೆಗೆ ಭಿಕ್ಷವ ನೀಡಲೆಂದು ಬಂದರು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ಶರಧಿಯಾವರ್ತಕೆಣೆಯಹ ಪೊಕ್ಕುಳಿಂದೆಂಬ |
ಪಿರಿಯ ಪುತ್ತಿನೊಳಿರ್ದ ರೋಮಾಳಿಯೆಂದೆಂಬ |
ಕರಿಯುರಗ ತನ್ವನಿತೆಯಾನನೇಂದುವನಟ್ಟಿ ತಾನವಗ್ರಹಿಪೆನೆಂದು ||
ಬರುತಿರಲು ತೆಱಹುಗುಡಬಾರದೆಂದುಭಯಕುಚ |
ಗಿರಿಗಳಡ್ಡೈಸೆ ಕಂಡಾಸ್ಥಿತಿಯ ಕಿವಿಯ ಹ |
ತ್ತಿರಿಗೆಯ್ದಿ ವಂದುಸಿರುವಂತಿರ್ದುವಾವೊರ್ವಗೋಪಾಂಗನೆಯ ನಿಡುಗಣ್ಗಳು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಭಿಕ್ಷವ ನೀಡಲೆಂದು ಬಂದ ಒರ್ವ ಗೋಪಾಂಗನೆಯ ಕಣ್ಗಳು ಕರ್ಣಾಂತವಾಗಿ ಇದ್ದ ಭಾವ ಹೇಗಿದ್ದಿತು? ಎಂದರೆ ಸಮುದ್ರದ ಸುಳಿಗೆ ಸಮಾನವಾದ ಹೊಕ್ಕುಳೆಂದೆಂಬ ದೊಡ್ಡಿತ್ತಾದ ಹುತ್ತಿನಿಂದ ಹೊಱಪಟ್ಟು ಬಂದ, ಅಸ್ತ್ರೀಯ ರೋಮಾಳಿಯೆಂದೆಂಬ, ಕರಿಯುರಗ = ಕಾಳೋರಗನು, ಅವಳ ಮುಖವೆಂಬ ಚಂದ್ರಮನ ಹಿಡಿದೇನೆಂದು ಬರುತ್ತಿರಲಾಗಿ; ತೆಱಹುಗುಡಬಾರದೆಂದು, ಅವಳ ಕುಚಂಗಳೆಂಬ ಎರಡು ಬೆಟ್ಟಗಳು ಅಡ್ಡಲಾದುವಂತೆ; ಇದನು ಕಂಡವರು ಸುಮ್ಮನಿರಬಾರದಲ್ಲಾ ಎಂದು ಕಂಡಸ್ಥಿತಿಯ ಹೇಳುವುದಕ್ಕೆ ಹೊಸಸುದ್ದಿಯನು ಕಿವಿಯಲ್ಲಿ ಏಕಾಂತವಾಗಿ ಹೇಳಬೇಕಲ್ಲದೆ ಪ್ರಕಟವಾಗಿ ಹೇಳಬಾರದು ಎಂದು ಕಂಡ ಸ್ಥಿತಿಯ ಹೇಳುವುದಕ್ಕೆ ಕಣ್ಣುಗಳು ಕಿವಿಯ ಸಮೀಪಕ್ಕೆ ಬಂದುವೇಕ್ಕೈ ಎಂಬ ಮರ್ಯಾದೆಯಿಂದ ಕರ್ಣಾಂತವಾದ ಕಣ್ಣನುಳ್ಳ ಗೋಪಾಂಗನೆಯು ಭಿಕ್ಷವ ನೀಡಲು ಬಂದಳು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಪೇಳುತ್ತಿರ್ದಾನು —

ಪರಿಮಳಿತ ಘೃತಮಿಶ್ರವಾದ ಪರಮಾನ್ನಮಂ |
ಪರಮಪರಿತೋಷದಿಂ ಪೊಚ್ಚಪೊಸತೆನಿಸ ಪೊಂ |
ಬರಿವಾಣದಲಿ ತೀವಿ ಪಿಡಿದು [1]ಗೋಪಿಯರೊಳೊರ್ವಳು ಶ್ರೀಕರಭರಾನತೆ[1]
ಉರುತರಸ್ತನಭಾರನತೆ ಬಂದು ಪಾತ್ರೆಯೊಳ್ |
ಗಿರದೆ ಭಿಕ್ಷವ ನೀಡಿ ಹರಿಯುಜಸುರಾಸತನ |
ಚರಣಕಾನತೆಯಾದಳತಿಮುದದಿಗೋಪಸತಿಮನದೊಳುತ್ಸಾಹಮಿಗಲು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಒರ್ವ ಗೋಪಾಂಗನೆ ಅತಿಭಕ್ತಿಯಿಂದ ಪರಿಮಳಿತ ಘೃತ ಮಿಶ್ರವಾದ= ಕಂಪಿಸಿದ ತುಪ್ಪದೊಡನೆ ಕೂಡಿದ ಪರ

ಪಾ.—1 ಗೋಪಸತಿಯರೊಳಗೊರ್ವ ಶ್ರೀಕರವಾನತೆ ‖ ಉರುತರದಸ್ತನಭಾರನತೆ ಬಂದ ಪಾತ್ರೆಯೊಳ | ಗಿರದೆ ಭಿಕ್ಷವ ನೀಡಿ ಹರಿಯುಜಸುರರು ನತಚರಣಕಾನತೆಯಾದಳು ‖

ಮಾನ್ನಮಂ = ಪಾಯಸವನು, ಪರಮಸಂತೋಷದಿಂದ ಪೊಚ್ಚಪೊಸತೆನಿಪ ಚಿನ್ನದ ಹರಿವಾಣದಲ್ಲಿ ಗಡಣಿಸಿ, ಆಸುವರ್ಣಪಾತ್ರೆಯನು ಕರದಲ್ಲಿ ಪಿಡಿದು, (ಶ್ರೀಕರಭರಾನತೆ = ಅದರ ಭಾರಕ್ಕೆತಗ್ಗಿದ ಕೈಯನುಳ್ಳವಳಾಗಿ,) ಉರುತರಸ್ತನಭಾರನತೆ= ಸ್ತನಂಗಳ ಭಾರಕ್ಕೆ ಬಡನಡು ಬಳುಕುತ್ತಿರಲಾಗಿ, ಬಾಗಿಲ ಪಟುಮುಖದಿಂದ ಬಂದು, ಹರಿಯಜಸುರಾಸುರರಿಂಗ ನಮಸ್ಕರಿಸಿಕೊಂಬುದಕ್ಕೆ ಯೋಗ್ಯವಾದ ಪಾದವನುಳ್ಳ ಮಹಾದೇವಂಗೆ ಭಿಕ್ಷವ ನೀಡಿ, ಓರ್ವ ಗೋಪಾಂಗನೆ ಸಂತಸದಿಂದ ನಮಸ್ಕರಿಸಿದಳು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಸಂಪಡದರ್* ಮಾಂದಳಿರಡಿಗಳಿಂ ಕನಕಕಲಶಕಳಶ |
ಮಂ ಪೋಲ್ವ[1] ಬಟ್ಟಬಲ್ಮೊಲೆಯು ಪವಳದ ಬಳ್ಳಿ |
ಯಂ ಪಳಿವ ಸಿರಿಯ ಚೆಂದುಟಿಯು ದಾಳಿಂಬೀಜದಂತೆಸೆವ ದಂತಂಗಳ ||
ಸಂಪಗೆಯ [2] ಬಿರಿಮುಗುಳಿಗೆಣೆಯೆನಿಪ ನಾಸಿಕದ |
ಸಂಪಗೆಯ ಪೂವಿನಂದದ ಮೈಸಿರಿಯ ಬಿಜ್ಜ |
ಸಂಪಗೆಯ ಕಂಪ ಬೀರುವ ಪೆಂಪಿನಸಳೊರ್ವ ಕೆಂಪು ಸತೆತರುತಿರ್ದಳು ||೨೪

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತೊರ್ವಸ್ತ್ರೀಯು ಭಿಕ್ಷವ ನೀಡುವುದಕ್ಕೆ ಒದುತಿರ್ದಳು. ಅದೆಂತೆಂದರೆ—ಸಂಪಡದರ್ ಮಾಂದಳಿರ್ಗೆ ಸಮಾನವಾದ ಪಾದತಳಂಗಳಿಂದ, ಕನಕಕಲಶಂಗಳಿಗೆ ಸರಿಯೆನಿಸುವ ಬಟ್ಟಕುಚಗಳಿಂದ, ಹವಳದ ಎಳವಳ್ಳಿಗೆ ಸರಿಯೆನಿಸುವ ಚೆಂದುಟಿಯಿಂದ, ದಾಳಿಂಬದ ಬೀಜಗಳಿಗೆ ಸರಿಯಾದ ಕಾಂತಿವೆತ್ತ ದಂತಪಙ್ತಿಗಳಿಂದ, ಸಂಪಗೆಯ ಬಿರಿಮುಗುಳಿಗೆಣೆಯೆನಿಸುವ ನಾಸಿಕದಿಂದ, ಸಂಪಗೆಯ ಹೂವಿನ ಕಾಂತಿಯಂತೊಪ್ಪುವ ಮೈಬಣ್ಣದಿಂದ, (ಮೆಱೆವ) ಸಂಪಗೆಯ ಹೂವಿನ ಪರಿಮಳಕ್ಕೆ ಸಮನೆನಿಸುವ ಉಸಿರ್ಗಂಪನುಳ್ಳ, ಗೋಪಾಂಗನೆ ನಡೆತಂದು ಈಶ್ವರಂಗೆ ಭಿಕ್ಷವಂ ನೀಡುತಿರ್ದಳು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಪೇಳುತಿರ್ದಾನು.

ನಕ್ಷತ್ರಮಂಟಪದೊಳೋರ್ವ ಗೋಪಾಲಸತಿ |
ನಕ್ಷತ್ರರಮಣನನುಜನ ತೊಡೆಯ ಮೇಲಿರ್ದು |
ನಕ್ಷತ್ರಮಂ ಪಿಡಿದು ನಕ್ಷತ್ರದಿಂ ಸಿಮವ ತುಂಬುತಿರಲಾಕ್ಷಣದೊಳು ||

---

ಪಾ—1. ಪ್ರೋಲ್ವ ... ಕನಕಕಳಶಂ ಪೋಲ್ವ.
2. ನನೆಯಂಗವಿಸುವಾನಾಸಿಕವಳ್ಳ.

ನಕ್ಷತ್ರಜನಕ ದನಿದೋಱಲ್ ಬಾಗಿಲೊಳ್ದಂ
ನಕ್ಷತ್ರದಿಂ ಕೇಳುತೆದ್ದು ಭಿಕ್ಷವ ನೀಡಿ ।
ನಕ್ಷತ್ರಪತಿಧರಗೆ ವಂದಿಸಿ ಮರಳಿ ಮನೆಯ ನಕ್ಷತ್ರಮಂ ಸಾರ್ದಳು ॥೨೪॥

ಟೀಕು—ಕೇಳಿರೈ, ಎಲೆ ಮುನಿಗಳಿರಾ! ನಕ್ಷತ್ರಮಂಟಪದೊಳೊರ್ವ ಗೊಪಾಲಸತಿ = ನಕ್ಷತ್ರ ಎಂದರೆ ಉತ್ತರಾನಕ್ಷತ್ರ, ಮಂಟಪಂಗಳೆಲ್ಲಕ್ಕು ಉತ್ತರಾಪಾದ ನಕ್ಷತ್ರವೆಸರ ಮಂಟಪದಲ್ಲಿ ಒಬ್ಬ ಗೋಪಾಂಗನೆ. ನಕ್ಷತ್ರರಮಣನನುಜನ ತೊಡೆಯು ಮೇಲಿರ್ದು = ನಕ್ಷತ್ರವೆಂದರೆ ರೇವತೀನಕ್ಷತ್ರ. ರಮಣ-ಆರೇವತೀರಮಣನಾದ ಬಲಭದ್ರನ, ಅನುಜ = ತಮ್ಮನಾದ ಶ್ರೀ ಕೃಷ್ಣದೇವರ, ತೊಡೆಯು ಮೇಲಿರ್ದು; ನಕ್ಷತ್ರಮಂ ಪಿಡಿದು = ನಕ್ಷತ್ರವೆಂದರೆ ಭರಣಿ, ಭರಣಿಯುಂ ಪಿಡಿದು, ನಕ್ಷತ್ರದಿಂ- ನಕ್ಷತ್ರ ಎಂದರೆ ಹಸ್ತನಕ್ಷತ್ರ, ಹಸ್ತದಿಂದ, ಹಿಮುವ ತುಂಬುತಿರಲಾಕ್ಷಣದೊಳು = ಹಿಮು ಎಂದರೆ ಪಚ್ಚೆಗಪ್ಪುರ, ಪಚ್ಚೆಗಪ್ಪುರವ ತುಂಬುತಿರಲು; ಆ ಕ್ಷಣದಲ್ಲಿ ನಕ್ಷತ್ರಜನಕ ದನಿದೋಱೆ = ನಕ್ಷತ್ರ ಎಂದರೆ ವಿಶಾಖ ನಕ್ಷತ್ರ, "ವಿಶಾಖಃ ಶಿಖಿವಾಹನಃ" ಎಂಬಭಿಧಾನದಿಂದ ವಿಶಾಖನೆಂದರೆ ಷಣ್ಮುಖನು. ಆತಂಗೆ ಜನಕ= ತಂದೆಯಾದ ಪರಮೇಶ್ವರನು, ದನಿದೋಱಲಾಗಿ; ಬಾಗಿಲೊಳ್ದಂ ನಕ್ಷತ್ರದಿಂ ಕೇಳುತೆದ್ದು = ಬಾಗಿಲ ಮುಂದಾದ ದನಿಯನ್ನು ನಕ್ಷತ್ರ ಎಂದರೆ ಶ್ರವಣ, ಆಕಿವಿಯಿಂದ ಕೇಳುತೆದ್ದು, ಭಿಕ್ಷಮಂ ನೀಡಿ, ನಕ್ಷತ್ರಪತಿಧರೆಗೆ = ನಕ್ಷತ್ರಂಗಳಿಗೆ ಪತಿಯಾದ ಚಂದ್ರನ ಧರಿಸಿದ ಶಿವನಿಗೆ, ನಮಸ್ಕರಿಸಿ, ಮರಳಿ ಮನೆಯ ನಕ್ಷತ್ರಮಂ ಸಾರ್ದಳು = ಮರಳಿ ಬಂದು ನಕ್ಷತ್ರ ಎಂದರೆ ಮೂಲನಕ್ಷತ್ರ, ತನ್ನ ಮೊದಲ ಮನೆಯ, ಸಾರ್ದಳು ಕಾಣಿರೈ ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಪೇಳುತಿರ್ದಾನು.

ಗರ್ಭಿಣಿ ಭಿಕ್ಷಾನ್ನಮಂ ನೀಡಲೆಂದು ಮ।
ತ್ತೊರ್ಬಳತ್ಯಾಲಸ್ಯಗಮನೆ ಪ್ರಾಣೇಶನುಮಮುಚ
[2]ಪರ್ಬಿರೂಪ್ರೂಸವ ರಂಜಿಸನೀಱಿಯೆಸಿಪ್ರೊನ[2]ಗರ್ಭಿಣೀನಡೆದು ಬರುತಿರೆ
ಅರ್ಭಕನಿದಾನವಿದೆ ಇವಳ ಬಸಿಱೊಳಗೆನು
ತ್ತುರ್ಬಿ[3]ನೊ[3]ಳು ತೋಱುವಂಜನಗಾಱರಂಪದಿಂ । ಕುಚಗಳು ॥೨೫॥
ಕಾರ್ಬೊಳೆಪ ತುದಿಯೊಳಾಲಿಂಗಿಸಿ ಮೊಱೆದುವವಳ [4]ಕೊರ್ಬಿದುಬ್ಬಿದ

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಗೋಪಾಂಗನೆಯರೊಳೊರ್ವ ಗರ್ಭಿಣಿ ಭಿಕ್ಷವ ನೀಡಲೆಂದು ಬಂದು, ಆ ಸ್ತ್ರೀಯು ಕುಚಾಗ್ರಂಗಳು ಆವ ಪ್ರಕಾರ

ಪಾ—1 ಳೆದ್ರ. 2. ಪರ್ಬಿದ ನಿಡುಬಾಸೆಯಿಂ ರಂಜಿಪ ನೀರೆಯೊಂದನಿಪ.
3. ಯೊ .4. ಪರ್ಬಿದುಭಯಕುಚಂಗಳು.

ದಲ್ಲಿ ಒಪ್ಪಿದುವು? ಎಂದರೆ,—ಕವೀಶ್ವರನು ಅಭಿವರ್ಣಿಸುತ್ತಿದ್ದಾನು. ಸರ್ಬಂಗೆ ಭಿಕ್ಷಾನ್ನಮಂ ನೀಡಲೆಂದು=ಜಗತ್ಕರ್ತನಾದ ಮಹಾದೇವಂಗೆ ಭಿಕ್ಷವ ನೀಡಬೇಕೆಂದು, ಅತ್ಯಾಲಸ್ಯಗಮನೆ=ಅಧಿಕವಾದ ಆಲಸ್ಯದೊಡನೆ ಕೂಡಿದ ನಡೆಯುಳ್ಳ ಪೂರ್ಣೇಂದುಮುಖಿ=ಸಂಪೂರ್ಣಚಂದ್ರನಿಗೆ ಸರಿಸಮಾನವಾದ ಕಾಂತಿಯಿಂದ ಬಿಳುಪೇರಿದ ಮುಖವನುಳ್ಳ, ಹಬ್ಬಿದ ಕಾಳಸರ್ಪಂಗೆ ಸಮಾನವಾದ ಬಾಸೆಯುನ್ನುಳ್ಳ ಗರ್ಭಿಣಿ, ಸಸುಬಳಲಿಕೆಯೊಡನೆ ನಡೆದು ಬರುತ್ತಿರಲಾಗಿ; ಇವಳ ಗರ್ಭದಲ್ಲಿ ಅರ್ಭಕನಿಧಾನ=ಸುಕುಮಾರನೆಂಬ ನಿಧಾನ, ಇವಳ ಬಸಿರಿಲ್ಲಿ ಉಬ್ಬಿ ತೋರುತಿದೆ ನೋಡಿ ಎಂದು ತೋರುವುದಕ್ಕೆ ಬಂದ, ಅಂಜನಗಾಢಿರ ಮರ್ಯಾದೆಯಿಂದ ಕಾಬೊರ್ಗಳೆಪ=ಕಪ್ಪಿನ ಹೊಳೆಹನು, ತುದಿಯೊಳಾಲಂಗಿಸಿ = ಮೊಲೆದುದಿಗಳಲ್ಲಿ ಆಲಿಂಗಿಸಿ, ಸೊಬಗಿನ ಅವಳ ದೊಡ್ಡಿತ್ತಾದ ಬಟ್ಟ ಮೊಲೆದುದಿಗಳು ಈಪ್ರಕಾರದಿಂದ ಒಪ್ಪದುವು ಎಂದು ಕವೀಶ್ವರನು ಹೇಳುತಿದ್ದಾನು.

ಅರವಿಂದಮುಖಿ ಮಧುರವಾಣಿ ಪಲ್ಲವಪಾಣಿ |
† ತರುಣಶೋಕಾಂಕುರಲಸಿತಚರಣತಳೆ ಜಾತಿ |
ವರಕುಸುಮ[1]ಸೌಗಂಧಬಂಧುರಸುಗಂಧಿ ಕಂಗೊಳಿಪ ಕೈರವಸುನೇತ್ರೆ[1] ||
ತೊಳಗಿದ ಮೊಲೆಪಾಲ [2]ಕಂದಂಗೆ ಕೊಡುತುಂ[2] ಭಕ್ತಿ |
ವೆರಸಿಯುಭವಂಗೆ ಭಿಕ್ಷವ ನೀಡುತ್ತುಂ ಮನದ[3] |
ಹರುಷದಿಂ ನೋಡುತುಂ ಪಂಕಜಾಕ್ಷಾಂಗಿಯೆನಿಪೋರ್ವ ಬಾಣತಿಯೆಸೆದಳು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಓರ್ವ ಗೋಪಾಂಗನೆಯು ಬಾಣತಿತನದ ಲಕ್ಷಣಸಮೇತವಾಗಿ ಭಿಕ್ಷವ ನೀಡುತಿರ್ದಳು ಎಂದು ಕವೀಶ್ವರನು ವರ್ಣಿಸುತ್ತಿದ್ದಾನು. ಅದು ಹೇಗೆಂದರೆ—ಅರವಿಂದಮುಖಿ= ತಾವರೆಗೆ ಸಮಾನವಾದ ಕಾಂತಿಯುತ್ತಾದ ಮುಖವನುಳ್ಳವಳು; ಮಧುರವಾಣಿ= ಕಿವಿಗೆ ಸೊಗಸಾದ ಸವಿಮಾತನಾಡುವಳು: ಪಲ್ಲವಪಾಣಿ= ಮಾಂದಳಿರ್ಗೆ ಸಮಾನವಾದ ಕರತಳವನುಳ್ಳವಳು; ತರುಣಾಶೋಕಾಂಕುರ ಲಸಿತಚರಣತಳೆ= ಕೋಮಲವಾದ ಅಶೋಕೆಯು ತಳಿರಿಗೆಣೆಯಾದ ಪದತಳವನುಳ್ಳವಳು; ಜಾತಿವರಕುಸುಮಸೌಗಂಧ ಬಂಧುರಸುಗಂಧಿ= ಜಾಜಿಯು ಪುಷ್ಪದ ಪರಿಮಳದೋಪಾದಿಯಲ್ಲಿ ಮನೋಹರವಾದ ಅಂಗಪರಿಮಳವನುಳ್ಳವಳು: ಕಂಗೊಳಿಪ ಕೈರವಸುನೇತ್ರೆ = ಮನೋಹರವಾದ ಕನ್ನೈದಿಲೆಸಳಿಗೆ ಸಮಾನವಾದ ಕಣ್ಣನುಳ್ಳವಳು—ಈ ಪ್ರಕಾರವಾದ ಚೆಲ್ವನುಳ್ಳ ಕೋ

† ತರುಣಾಶೋಕಾಂಕುರ ಎಂದಿರಬೇಕು. ವೃತ್ತದ ನಿರ್ಬಂಧದಿಂದ ಹೀಗೆ ಮಾಡಿರಬಹುದೆಂದು ತೋರುತ್ತದೆ.

ಪಾ — 1. ಸೌಗಂಧಿಕಕುಮುದಬಾಂಧವದೊಳೆ ಕಂಗೊಳಿಪ ಕುಮುದನೇತ್ರೆ.
2. ಕಂದನಿಗೂಡುತುಂ. 3. ತಹರನ.

ಮಲೆ, ತೊಱೆದ ಪೊಲೆವಾಲನ್ನು ಕಂದಂಗೆ ಕೊಡುತ್ತ, ಭಕ್ತಿಯೊಡನೆ ಕೂಡಿ, ಅಭವಂಗೆ ವಂದಿಸಿ ಭಿಕ್ಷವಂ ನೀಡಿ, ಮನಸ್ಸಿನ ಹರ್ಷದಿಂದ ಶಿವನ ಪದಂಗಳಂ ನೋಡಿ ಬರುವಲ್ಲಿ—ಪಂಚಬಾಣಾಂಗಿಯೆನಲು= ಪಂಚಬಾಣಂಗಳು ಇತ್ತೀಕ್ಕೈ ಎಂಬ ಮರ್ಯಾದೆಯುಲ್ಲಿ ಓರ್ವ ಬಾಣಿತಿಯೆಸೆದಳು ಎಂದು ಹೇಳುವುದು ಸ್ವಭಾವವಾದ ಅರ್ಥ. (ಅವಳು ಬಾಣತಿ = ಎಂದರೆ ಬಾಣವುಳ್ಳವಳು ಹೇಗೆ ಆದಳು?) ಪಂಚ ಬಾಣಂಗಳು ಅವಳ ಅಂಗದಲ್ಲಿ ಎಲ್ಲಿ ಇದ್ದುವು ? ಎಂದರೆ—ಮುಖದಲ್ಲಿ ತಾವರೆ ಯೆಂಬ ಬಾಣ, ಪದದಲ್ಲಿ ಅಶೋಕೆಯೆಂಬ ಬಾಣ, ಹಸ್ತದಲ್ಲಿ ಚೂತವೆಂಬ ಬಾಣ, ತನುಗಂಪಿನಲ್ಲಿ ಮಲ್ಲಿಗೆಯೆಂಬ ಬಾಣ, ಕಣ್ಣಿನಲ್ಲಿ ನೀಲೋತ್ಪಲವೆಂಬ ಬಾಣ, ಈ ಪ್ರಕಾರದಲ್ಲಿ ಪಂಚಬಾಣಂಗಳೇ ಅಯುವಯುವಾದ ಮರ್ಯಾದೆಯಿಂದೊಪ್ಪುವ ಓರ್ವ ಬಾಣತಿ ಶಿವಂಗೆ ಭಿಕ್ಷವ ನೀಡಿದಳು ಎಂದು ಕವೀಶ್ವರನು ಅಭಿವರ್ಣಿಸುತ್ತಿರ್ದಾನು.

ಉಟ್ಟ ಪಟ್ಟಾವಳಿಯು ನವರತ್ನಮುಡಿಗೆಗಳ |
ತೊಟ್ಟ [1]ನೂತನರತ್ನರುಚಿಯು[1] ಮೆಯ್ದೊಡಿಗೆಗಳ |
ಇಟ್ಟ ಕತ್ತುರಿಯು ತಿಲಕದ ಸಕಲಪರಿಮಳದ್ರವ್ಯಾನುಲೇಪನಗಳ ||
ಕಟ್ಟಿದ ಕದಂಬಜಾತಿಯು ಪೂಮುಱುಂಬುಗಳ |
ಮುಟ್ಟಿಯೋಲೈಪ ತುಂಬಿಗಳ ಬಳಗದ ನಡುವೆ |
ಕಟ್ಟಾಣಿಪೆಣ್ಗಳೈತಂದು [2]ಭಿಕ್ಷವ ನೀಡಲಿಟ್ಟಣಿಸಿ ನಿಂದಿರ್ದರು[2] || ೨೮

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಪರಮೇಶ್ವರಂಗೆ ಭಿಕ್ಷವ ನೀಡುವು ದಕ್ಕೆ ಬಂದು ನಿಂದಿರ್ದ ಸತಿಯರು ಆವ ಪ್ರಕಾರದಲ್ಲಿ ನಿಂದಿರ್ದರು? ಎಂದರೆ— ಉಟ್ಟ ಪಟ್ಟಾವಳಿಯು = ವಿಚಿತ್ರವಾದ ಚಿತ್ರಾಂಬರವನುಟ್ಟು, (ತೊಟ್ಟನವರತ್ನದುಡಿ ಗೆಗಳ = ) ಹೊಸದಾದ ನವರತ್ನಂಗಳಿಂದ ಅಲಂಕಾರವಾದ ಕಟಕ, ಕೇಯೂರ, ಮುದ್ರಿಕೆ, ಕಾಂಚೀದಾಮ, ಕರ್ಣಪತ್ರ, ನೂಪುರ, ಮುತ್ತಿನಹಾರ ಮೊದಲಾದ ಆಭರಣಂಗಳ ತೊಟ್ಟು, (ಇಟ್ಟ ಕತ್ತುರಿಯು ತಿಲಕದ = ) ಹಣೆಗೆ ಕತ್ತುರಿಯು ತಿಲಕ ವಿಟ್ಟು, (ಸಕಲ ಪರಿಮಳದ್ರವ್ಯಾನುಲೇಪನಗಳ = ) ಪುನುಗು ಕುಂಕುಮಕರ್ಪೂರದೊ ಡನೆ ಕೂಡಿದ ಪರಿಮಳಗಂಧವನನುಲೇಪಿಸಿ (ಕಟ್ಟಿದ ಕದಂಬಜಾತಿಯು ಪೂಮುಱುಂ ಬುಗಳ = ) ಕದಂಬವಾದ ಜಾಜಿ, ಮಲ್ಲಿಗೆ, ಸೇವಂತಿಗೆ, ಸುರಗಿ, ಸುರಹೊನ್ನೆ, ಸಂಪಗೆ, ಮೊದಲಾದ ಪುಷ್ಪಂಗಳ ತುಱುಬಿಗೆ ಮುಡಿದು, (ಮುಟ್ಟಿಯೋಲೈಪ... ನಡುವೆ = ) ಆ ಪರಿಮಳಕ್ಕೆ ತುಂಬಿಗಳು ಬಂದು ಬಳಸಿ ಓಲೈಸಲಾಗಿ ; ಕಟ್ಟಾಣಿ

---

ಪಾ—1. ನೂತರುಚಿರವಾಯು. 2. ನೀಡುತಿರ್ದರಂದೀಶ್ವರಂಗೆ.

ವೆಣ್ಣುಗಳು ಅಂಬರಶೃಂಗಾರ, ಅನುಲೇಪಶೃಂಗಾರ, ಮಾಂಗಲ್ಯಶೃಂಗಾರ. ಇವರೊಡನೆ ಕೂಡಿದ ನೈಪಥ್ಯಶೃಂಗಾರವೊಪ್ಪುತಿರಲಾಗಿ, ಶಿವನಿಗೆ ಭಿಕ್ಷವ ನೀಡುವುದಕ್ಕೆ ಇಟ್ಟಣಿಸಿ ನಿಂದಿರ್ದಳು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಕರಿಯ ತಲೆನವಿರೆಣ್ಣೆಗಂಟು ಬೆನ್ನಿನೊಳೊಲೆಯೆ ।
[1]ಕರಿಯ ಸಾದಿನ ಬೊಟ್ಟನಿಟ್ಟು ಸಾಲೆಯುದೊಂದು ।
ಕರಿಯ ಕತ್ತುರಿಮಡಿಯನುಟ್ಟು[1] ಮಿಂಚುವ ಕಣ್ಗೆ ಕರಿಯ ಕಾಡಿಗೆಯನೆಚ್ಚಿ ॥
ಕರಿಯ ನೇರಿಲ ಹಣ್ಣ ಪೋಲ್ವ ಮೆಯ್ವೆಳಗಚ್ಚ ।
ಕರಿಯ ಮುಗಿಲಂ ಜಱೆಯೆ ಕರಿಯ ಗೋವಳತಿ ಮದ ।
ಕರಿದನುಜಹರಗೆ ಭಿಕ್ಷವ ನೀಡಿ ಮುಂಗಾರ ಸಿರಿಯಂತೆ ಕಣ್ಗೆಸೆದಳು ॥೨೯॥

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಒಬ್ಬ ಕಪ್ಪಿನ ಗೋಪಾಂಗನೆ ಶಿವನಿಗೆ ಭಿಕ್ಷವ ನೀಡಬಂದಲ್ಲಿ ಆವ ಪ್ರಕಾರದಲ್ಲಿ ಒಪ್ಪಿದಳು? ಎಂದರೆ—ಅತಿಕರಿದಾದ ತಲೆನವಿರಿನಿಂದ ಹಾಕಲ್ಪಟ್ಟ ಎಣ್ಣೆಗಂಟು ಬೆನ್ನೊಳು ಒಪ್ಪುತಿರಲಾಗಿ, ಕರಿಯ ಸಾದಿನ ಬೊಟ್ಟು ಹಣೆಯಲ್ಲಿ ರಂಜಿಸಲಾಗಿ, ಕರಿದಾದ ಕಸ್ತೂರಿಯ ಮಡಿಯ ಸಾಲೆಯನುಟ್ಟು, ಮಿಂಚುವ ಕಣ್ಣುಗಳಿಗೆ ಕರಿದಾದ ಕಪ್ಪನೆಚ್ಚಿಕೊಂಡು, ಕರಿದಾದ ನೇಱಿಲ ಹಣ್ಣಿನ ಕಾಂತಿ ಶರೀರದಲ್ಲಿ ತೋಱುತ್ತಿರೆ, ಆ ಕಾಂತಿ ಕರಿಯ ಮುಗಿಲನು ಜಱೆಯುತಿರಲಾಗಿ, ಕಪ್ಪಾದ ಶರೀರವನುಳ್ಳ ಕಪ್ಪಿನ ಗೋಪಾಂಗನೆಯು, ಕರಿದನುಜಹರಗೆ=ಗಜಾಸುರನ ಕೊಂದ ಹರಗೆ ಭಿಕ್ಷವ ನೀಡುವಲ್ಲಿ, ಕಾರ್ಗಾಲದ ಲಕ್ಷ್ಮಿಯೋಕ್ಕೈ! ಎಂಬ ಹಾಗೆ ಒಪ್ಪುತಿರ್ದಳು ಕಾಣಿರೈ, ಎಂದು ಕವೀಶ್ವರನು ಹೇಳುತಿರ್ದಾನು.

ದಿನದಿನಕೆ ನೋಡಲೊಂದೊಂದು ಪರಿಯಾಗಿಪಂ ।
ಮನದೊಳು ಕಳಂಕಂ ಜಹಾತ್ಮಸಿದ್ಧಲ್ಲಿರದ ।
ವನಪವಸ್ಥಂ ದಿವಾಕರಚಂದ್ರಮನವನ ಬೞೀ[2]ಯ ನಿಂದಿರವೆ[2] ಬಂದು ॥
ತನತನಗೆ [3]ನೆರೆದಿಪ ಲತಾಂಗಿಯರ ಮುಖಚಂದಿ ।
ರನ ಸುತ್ತ [3]ಲೋಲ್ಯಪ ತಾರಕೆಗಳೋ ಇವೆಂ ।
ದೆನಲು ಮುತ್ತಿನ ಬೈತಲೆಯ ಗೋಪವನಿತೆಯರು ಭಿಕ್ಷಮಂ ತರುತಿರ್ದರು ॥

---

ಪಾ—1. ಕರಿಶಾಲೆಯ ಮಡಿಯನುಟ್ಟು ಸಾಕಿಯದೊಂದು ಕರಿಯ ಕಸ್ತುರಿಯ ಬೊಟ್ಟನಿಟ್ಟು. 2. ಬೞಿಯೊಳಿರವೆಂದು.
3. ನೆರದ ಲಲಿತಾಂಗಿಯರ ಮುಖಚಂದ್ರನೆನುತ.

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಶಿವಂಗೆ ಭಿಕ್ಷಮಂ ತರುತಿರ್ದ ಗೋಪಾಂಗನೆಯರ ಮುತ್ತಿನ ಬೈತಲೆಗಳಾವ ಪ್ರಕಾರದಲ್ಲಿ ಒಪ್ಪಿದುವು? ಎಂದರೆ—ಚಂದ್ರನು ದಿನದಿನಕ್ಕೆ ನೋಡಲಾಗಿ ಒಂದು ದಿನ ಸಣ್ಣನಾಗಿ ಒಂದು ದಿನ ದೊಡ್ಡದಾಗಿ ತೋಱುವನಲ್ಲದೆ ಒಂದೇ ಬಗೆಯಲ್ಲಿ ಇರುವವನಲ್ಲ; ಒಳಗೆ ಕಳಂಕವುಳ್ಳವನು; ಜಡಾತ್ಮನು; (ಇದ್ದಲ್ಲಿರದವನು = ಇದ್ದಲ್ಲಿ ಇರದೆ ಮೂಡ ಪಡುವಲೋಡಿಯಾಡುವನು: (ಅಪದಸ್ಥಂ = )ಪದಸ್ಥನಲ್ಲ; ಹಗಲಿಗೆ ಕಳ್ಳನಾಗಿ ಕಾಣಿಸಿಕೊಳ್ಳುವನು: ಇಂಥ ಅವಗುಣದಿಂ ದೂಷಕನಾದ ಚಂದ್ರನ ಬಳಿಯಲ್ಲಿ ಇರಲೊಲ್ಲೆವೆಂದು ತನತನಗೆ ಬಂದು ಲತಾಂಗಿಯಾದ ಆ ಸ್ತ್ರೀಯರ ಮುಖವೆಂಬ ಚಂದ್ರನನು ಒಲೈಸುವ ತಾರಕೆಗಳೋ ಎಂಬ ಮರ್‍ಯಾದೆಯಿಂದ ಮೆಱೆದ ಮುತ್ತಿನ ಬೈತಲೆಯ ಗೋಪಾಂಗನೆಯರು ಪರಮೇಶ್ವರಂಗೆ ಭಿಕ್ಷವಂ ನೀಡುತಿರ್ದರು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ಕಂಗಳೋ ಕಾಮನ ಶರಂಗಳೋ ನೀಲಾಳ |
ಕಂಗಳೋ ಅಳಿಯ ಬಳಗಂಗಳೋ ಅರುಣಾಧ |
ರಂಗಳೋ [ಪವಳದಲತಿಕೆಗಳೋ] ತೊಳಗ ವದನಂಗಳೋ ಪೂರ್ಣಕಳೆಯ ||
ತಿಂಗಳೋ ನಗೆಯೊ ಬೆಳುದಿಂಗಳೋ ತುಂಗಸ್ತ |
ನಂಗಳೋ ಚಕ್ರವಾಕಂಗಳೋ ಮೃದುಪದತ |
ಲಂಗಳೋ [1]ತಳಿರೊ ಶಿವಂಗೆ[1] ಭಿಕ್ಷವ ನೀಡ ಬಂದ ಗೋಪಾಂಗನೆಯರು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಮತ್ತಾವ ಪ್ರಕಾರವಾದ ಗೋಪಾಂಗನೆಯರು ಆವ ಪ್ರಕಾರದಲ್ಲಿ ಒಪ್ಪಿದರು? ಎಂದರೆ—ಕಾಮನ ಬಾಣಂಗಳಿಗೆ ಸರಿಯಾಗಿ ಮೋಹನವ ಬೀಱುವ ಕಣ್ಣುಳ್ಳವರು; ತುಂಬಿಗಳಿಗೆ ಸಮಾನವಾದ ಕಪ್ಪಿನ ಕುರುಳನುಳ್ಳವರು; ಹವಳದ ಲತೆಗಳಿಗೆ ಸಮಾನವಾದ ಕೆಂಪಾದ ಚೆಂದುಟಿಯನುಳ್ಳವರು; ಪೂರ್ಣಚಂದ್ರನಿಗೆ ಸರಿಯಾದ ಎಳನಗೆಯೆಂಬ ಬೆಳುದಿಂಗಳೊಡನೆ ಕೂಡಿದ ಮುಖವನುಳ್ಳವರು; ಚಕ್ರವಾಕಪಕ್ಷಿಗಳಿಗೆ ಸಮಾನವಾದ ಬಟ್ಟ ಮೊಲೆಗಳನುಳ್ಳವರು; ಎಳದಳಿರಿಗೆ ಸಮಾನವಾದ ಪದತಳವನುಳ್ಳ ಶೃಂಗಾರವಾದ ಗೋಪಾಂಗನೆಯರು ಶಿವಂಗೆ ಭಿಕ್ಷವ ನೀಡ ಬಂದರು ಕಾಣಿರೈ. ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ಎಂದು ಮನೆಯಂ ಪೊಱಮಡದ ಬಟ್ಟೆವೆಱಸಿ ಮೊಗವ |
ಚೆಂದಳಿರ್ಮೆಟ್ಟಿಯ ನೆಳ್ಳುಗುರಬಳಿ ಭಿಕ್ಷುವಂ |
ತಂದಿಕ್ಕೆ ಮುರಳಿಯುಂಗಳದ ಶಶಿಕಾಂತ[2]ದಿಂದೆಸೆವ[2] ಕನ್ನಡಿಗೋಡೆಯ ||

---

ಪಾ—1. ತಳಿರೊ ಎನೆ ಶಿವಗೆ. 2. ನೂಪುರದ.

ಬಂದು ಮಱೆಗೊಂಡಿರಲ್ಕದು ದ್ರವಿಸುತಿರಲಾಗಿ |
ಮುಂದೆ ಜವನಿಕೆಯ ಮಱೆಯೊಳು ಶಿವಂಗಿದಿರಾಗಿ |
ನಿಂದ ನರ್ತಕಿಯಂತೆ ಚೆಲುವಾಗಿ ಪರಮೂರ್ತಿಯಂ ನಿರೀಕ್ಷಿಸುತಿರ್ದಳು||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಒಬ್ಬ ಗೋಪಾಂಗನೆ ಚಂದ್ರಕಾಂತದ ಕನ್ನಡಿಯ ಗೋಡೆಯ ಮಱೆಯಲ್ಲಿ ನಿಂದು ನೋಡುತಿರ್ದ ಸ್ತ್ರೀಯ ಭಾವ ಹೇಗಿದ್ದಿತು?—ಎಂದರೆ ಕವೀಶ್ವರನು ಹೇಳುತಿದ್ದಾನು. ಎಂದೂ ಮನೆಯನ್ನು ಹೊಱಪಡದ ಮರ್ಯಾದೆಯಲ್ಲಿ ಮಹಾಸುಖಿಯಾದ, ಬಟ್ಟಮೆಱೆಗೆ ಸಮಾನವಾದ ವಕ್ಷವನುಳ್ಳ ಚಂದ್ರಮುಖಿ, ಕೆಂದಳಿರ್ಗೆ ಸಮಾನವಾದ ತುಟಿಯನುಳ್ಳ, ನಳ್ಳುಗುರುಗಳನುಳ್ಳ ಅಬಲೆ, ಶಿವಂಗೆ ಭಿಕ್ಷವ ನೀಡಿ, ಮರಳಿ ಬಂದು, ತನ್ನಂಗಳದ ಮುಂದಣ ಚಂದ್ರಕಾಂತದ ಅತ್ಯಂತಶುಭ್ರವಾದ ಕನ್ನಡಿಗೋಡೆಯ ಮಱೆಯಲ್ಲಿ ನಿಂದಿರಲಾಗಿ; ಅದು ಇವಳ ಮುಖವೆಂಬ ಚಂದ್ರನಿಂದ ಕರಗಿ ದ್ರವಿಸಲಾಗಿ; ಹೇಗೆ ಒಪ್ಪಿದಳು?—ಎಂದರೆ, ಈ ಚಂದ್ರಕಾಂತದ ಕನ್ನಡಿಗೋಡೆಯೆಂಬ ತೆರೆಯ ಮಱೆಯಲ್ಲಿ ಶಿವನಿಗಿದಿರಾಗಿ ನಿಂದ ನರ್ತನ ಸ್ತ್ರೀಯೋಕ್ಕೆ! ಎಂಬ ಹಾಗೆ, ಚೆಱಗಾಗಿ, ಹರನ ಮೂರ್ತಿಯ ನೋಡುವ ಗೋಪಾಂಗನೆ ಈ ಪ್ರಕಾರದಲ್ಲಿ ಒಪ್ಪಿದಳು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿದ್ದಾನು.

ಬಿಗಿದುಟ್ಟ ನಿಱಿಯ ಕಿತ್ತಿಳೆಗಾವಿನೀರೆ ಕೆ |
ಮ್ಮುಗಿಲಾಗೆ ತೊಟ್ಟ ಹೊಸಮುತ್ತಿನಾಭರಣ ತಾ |
ರೆಗಳಾಗೆ ಮಣಿಯೊಳಿಕ್ಕಿದ [ಸ್ವಚ್ಛ]ನಾಮ ಹೆಱೆಯಾಗೆ ಬೆಳಗುವ ಕಂಗಳು||
ನಗುವ ನೈದಿಲ ಪೂಗಳಾಗೆ ಕುರುಳ್ಗಳ ತುಂ |
ಬಿಗಳಾಗೆ ಧೂಳಿಧೂಸರದ ಸಂಧ್ಯಾಂಗನೆಯ |
ಬಗೆಯನಂಗೀಕರಿಸಿ ಬಾಗಿಲೊಳಗೊರ್ವ ಸಾವಿತ್ರ್ಯಾಂಗಿ ಕಣ್ಗೆಸೆದಿರ್ದಳು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಶ್ರೀ ಕೃಷ್ಣಸ್ವಾಮಿಯ ಅರಮನೆಯಲ್ಲಿ ಒರ್ವ ಗೋಪಾಂಗನೆ ಶಿವನಿಗೆ ಭಿಕ್ಷವ ನೀಡಬೇಕೆಂದು ತನ್ನ ಬಾಗಿಲಲ್ಲಿ ನಿಂದಿರುವಲ್ಲಿ ಹೇಗೆ ಒಪ್ಪಿದಳು? ಎಂದರೆ—ಸಂಧ್ಯಾಂಗನೆಯ ಪ್ರಕಾರದಲ್ಲಿ ಒಪ್ಪಿದಳು ಎಂದು ಕವೀಶ್ವರನು ವರ್ಣಿಸುತಿದ್ದಾನು. ಅದು ಹೇಗೆಂದರೆ—ಸಂಧ್ಯಾಕಾಲದಲ್ಲಿ ಮುಗಿಲು ಕೆಂಪಾಗಿಹುದು, ಆ ಮರ್ಯಾದೆಯಲ್ಲಿ ಈ ಸ್ತ್ರೀಯು ನಿಱುವಿಡಿದುಟ್ಟ ಕಿತ್ತಿಳೆಗಾವಿಯ ನೀರೆ ಕೆಂಪಾಗಿರಲಾಗಿ; ಆ ಸಂಜೆಯಲ್ಲಿ ನಕ್ಷತ್ರಂಗಳು ತೋಱುವವು, (ಹಾಗೆ) ಈ ಗೋಪಸ್ತ್ರೀಯು ತೊಟ್ಟ ಹೊಸ ಮುತ್ತಿನಾಭರಣಂಗಳೆ ನಕ್ಷತ್ರಂಗಳಾಗಲಾಗಿ; ಆ ಸಂಜೆಯಲ್ಲಿ ಹೆಱೆ = ಚಂದ್ರ ತೋಱುವುದು, ಈ ಸ್ತ್ರೀಯು

ಹಗೆಯುಲ್ಲಿಕ್ಕಿದ ಸಣ್ಣನಾಮವೇ ಆ ಹೆಜ್ಜೆಯಾಗಲಾಗಿ; ಆ ಸಂಜೆಯುಲ್ಲಿ ನೈದಿಲೆಗಳು ಅರಳುವುವು, ಇಲ್ಲಿ ಈ ಸತಿಯು ಕಣ್ಣುಗಳೆಂಬ ನೈದಿಲೆಯರಳಿ ಕಾಂತಿಮತ್ತಾಗಿ ಇರಲಾಗಿ; ಆ ಸಂಜೆಯುಲ್ಲಿ ತುಂಬಿಗಳು ಆಡುವುವು, ಈ ಗೋಪಾಲಸತಿಯುಲ್ಲಿ ಕುರುಳುಗಳೆಂಬ ತುಂಬಿಗಳು ಆಡುವುವು, ಆ ಸಂಧ್ಯಾಸಮಯವು ಧೂಳಿಂದ ಧೂಸರವರ್ಣವಾಗಿ ಬಪ್ಪುವುದು, ಆ ಮರ್ಯಾದೆಯಿಂದ ಸಂಧ್ಯಾಂಗನೆ ಸ್ತ್ರೀಯಾದಳೋ ಎಂಬ ಮರ್ಯಾದೆಯುಲ್ಲಿ ಬಾಗಿಲಲ್ಲಿ ಶ್ಯಾಮಾಂಗಿಯಾದ ಒಬ್ಬ ಗೋಪಸ್ತ್ರೀಯು ಒಪ್ಪಿದಳು ಕಾಣಿರೈ ಎಂದು ಸೂತಪೌರಾಣಿಕನು ವರ್ಣಿಸುತಿರ್ದಾನು.

ಮೃಡಗೆ ಭಿಕ್ಷವನೊರ್ವ ಗೋಪಾಲಸತಿ ನೀಡ |
ಲೊಡನವಳ ಮೊಗಸಸಿಯುಸೀಶನಾಭರಣವಹಿ |
ತುಡುಕೆ ತಿರುಗಿದ ಸತಿಯ [1]ಮುಡಿ ಕೇಕಿಯಂತಿರಲು[1] ಬೆದರು[2] ಶಿವನ
ಅಡರೆ ತತ್ಫಣಿಯುದಕೆ [2]ನಕ್ಷತ್ರಪತಿ ಬೆದು | [ಜಟಾಗ್ರವ ||
ರ್ತಡೆಯಮೃತಬಿಂದು ಸೂಸಲು ರುಂಡಶಿರಗಳಸು |
ವಡೆದು [3]ಕುಬುಬೆಂದಾಲುತ[3]ಭವನ ತನುವ್ರೊಳದ್ಭುತರಸವ ನೈಗಜಿದುವು||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಒರ್ವ ಗೋಪಾಂಗನೆ ಶಿವಂಗೆ ಭಿಕ್ಷವ ನೀಡುತಿರಲಾಗಿ, ಅವಳ ಮುಖವನು ಕಂಡು ಚಂದ್ರನೆಂದು ಶಿವನಿಗೆ ಆಭರಣವಾಗಿದ್ದ ಸರ್ಪನು ಹೆಡೆಯೆತ್ತಿ ಬುಸ್ಸೆಂದು ಮುಖಕ್ಕೆ ತುಡುಕಲಾಗಿ, ಆ ಸತಿಯಂಜಿ ಮೊಗದಿರುಹಿದೊಡೆ, ಅವಳ ಮುಡಿಯನು ಕಂಡು ನವಿಲೆಂದು ಬೆದರಿ, ಶಿವನ ಜಟಾಮುಕುಟದಲ್ಲಿ ಇಡುಕುರಾದ ಠಾವದಲ್ಲಿ ಇರಬೇಕು ಎಂದು ಬರುತ್ತಿರಲಾಗಿ; ಆ ಜಡೆಮುಡಿಯುಲ್ಲಿದ್ದ ಚಂದ್ರನು ಬರುವ ಸರ್ಪನ ಕಂಡು ಭಯದಿಂದ ಬೆದರಲಾಗಿ; (ಆತನ) ಅಮೃತಬಿಂದುಗಳು ಕಡೆಗೆ ಸೂಸಲಾಗಿ; ಈಶ್ವರನು ಧರಿಸಿದ ರುಂಡಮಾಲೆಯ ಶಿರಸ್ಸುಗಳಿಗೆ ಪ್ರಾಣಂಗಳು ಬರಲಾಗಿ; ಆ ಶಿರಸ್ಸುಗಳು ಕುಬುಬೆಂದು ಬೊಬ್ಬಿಡಲಾಗಿ: ಶಿವನು ತನ್ನ ತನುವಿನಲಿ ಹುಟ್ಟಿದ ಅನಿಮಿತ್ತವಾದ ಅದ್ಭುತರಸವಂ ಕಂಡು ವಿನೋದಿಸುತಿರ್ದನು ಎಂದು ಸೂತಮುನೀಶ್ವರನು ಹೇಳುತಿರ್ದಾನು.

---

ಪಾ—1. ಮುಡಿಯು ನವಿಲಂತಿರಲು. 2. ನಡುಗೆಯುಡುಪತಿ.
3. ಕುಬುಬುಸೆಂದುಲಿಯುತೆ.

ಬವರಲು ಕರೋಟಿಮಾಲೆಗಳದಱೊಳೊಂದು ತಲೆ |
[1]ದಿಮಿಮಿ ದಿಮಿದಿಮಿಕಿ ಧಿತ್ರೊಂಗಿ ತ್ರೊಂಗಿಣ ತ್ರೊಂಗಿ |
ತದಿಮಿ ದಿಮಿದಿಮಿಕಿಟ ವ್ರ್ಯಣವ್ರ್ಯಣ ಝುಂಕುರೆ ಝುಂಕು ಝುಂಕು ಜಗಕೆ ||
ತದಿತದಿಗ ದದಿಗದ ಕುಟು ಕ್ರ್ಯಣಿ ನ್ರ್ಯಣೆನಲು ವಾದ್ಯ |
ಮದು ಗಜಾಸುರನ[1] ಮೇಲಾಡಿದಂದಿನ ರುದ್ರ |
ನಿದೆ ಬಂದ[2]ಶಂಭು ಕೋ ಎಂದು ನಾಟ್ಯದ ಪದನ ಪಾಡಿ[2]ಬೊಬ್ಬಿಡುತಿರ್ದುದು ||

ಟೀಕು.—ಕೇಳಿರೈ, ಎಲೆ ಮುನಿಗಳಿರಾ! ಅನಂತಮಹಿಮನಾದ ವಿನೋದ ಚರಿತ್ರನು ಭಕ್ತಜನಲೀಲಾಲೋಲಚಿತ್ತನು ಶ್ರೀಮನ್ನಾರಾಯಣಸ್ವಾಮಿಯು ಅರಮನೆಯ ಮುಂಗಡೆಯಲ್ಲಿ ಗೋಪಸ್ತ್ರೀಯರು ತಂದು ನೀಡಿದ ಭಿಕ್ಷವಂ ಕೈಕೊಂಡು ಬರುವಲ್ಲಿ—ಶಿವನು ಧರಿಸಿದ ಕರೋಟಿಮಾಲೆಗಳೊಳಗೆ ಒಂದು ತಲೆ ಕಣ್ಬಿಟ್ಟು ನಲಿದು ನಲವೇಱು ಆನಂದದಿಂದ ಶಿವನಿಗೆ ನಾಟ್ಯದ ಪದವನ್ನು ಹಾಡುತ್ತಿದ್ದಿತು: ಅದು ಹೇಗೆ? ಎಂದರೆ—ದಿಮಿ ದಿಮಿಕು ದಿಕ್ಕಿಟ ಎನುತ ದಿತ್ರೊಂಗು ತ್ರೊಂಗಿ ತ್ರೊಂಗಿ ಎನುತ್ತ, ದಿಮಿಕಿಟ ವ್ರ್ಯಣ ವ್ರ್ಯಣ ಝುಂಕುರೆ ಝುಂಕು ಜಗಕೆನುತ್ತ, ದಧಿಗ ತದ್ಧಿಗ ಧಿಕ್ಕಿಟ ಕ್ರ್ಯಣಿ ನ್ರ್ಯಣಿ ನ್ರ್ಯಣವೆಂಬ ವಾದ್ಯಸಂಕಟವಾದ ತಾಳದೊಡನೆ ಕೂಡಿದ ಧ್ವನಿಯಿಂದ ಗಜಾಸುರನ ನಡುನಡುನೆ ಸೀಳಿ, ಎದೆಯ ಮೇಲೆ ಮೆಟ್ಟಿ ನಿಂದು, ಜಡೆಯು ಕೆದಱೆ, ಕೈಯ ಡಮರುಗ ಢಂ ಎನಲು, ತೊಟ್ಟ ಸರ್ಪಗಳು ಬುಸ್ಸೆನಲು, ಮುಡಿಯ ಮೇಲಣ ಗಂಗೆ ತುಳುಕಲು, ಉಟ್ಟ ಪುಲಿದೊಗಲು ಸಡಿಲಲು, ಉಡೆಯ ಘಂಟೆ ಢಣಢಣವೆನಲು, ಪಾದದ ಕಿಱುಗೆಜ್ಜೆ ಉಲಿಯುತ್ತಿರಲು, ಕೋ ಎಂದು ನಾಟ್ಯವನಾಡಿದ ಶಂಭು ಬಂದನಿದೆ ನೋಡಿ! ಎಂದು ಬೊಬ್ಬಿಡುತ್ತ, ಒಂದು ಶಿರಸ್ಸು ಈ ಪ್ರಕಾರದಲ್ಲಿ ಶಿವನ ಕೀರ್ತಿಸಿತ್ತು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತ ಮುನೀಶ್ವರನು ಹೇಳುತಿರ್ದನು.

ನಾರಾಯಣಂಗೆ ಮಱವೆಯ ಬೀಱ[1] ಗೋಪಾಲ |
ನಾರಿಯರ ಮನೆಮನೆಗಳಲಿ ನೋಳ್ಪೆವೆಂದು ನಾ |
ನಾರೂಪ ಧರಿಸಿ ಭಿಕ್ಷವ ಬೇಡಿ ನೋಡಿಯವರಂ ಕೃತಾರ್ಥರ ಮಾಡುತುಂ |

---

ಪಾ—1. ತದಿಮಿ ತದಿಮಿಕಿಟ ತ್ರೊಂಗಿಣಾಂತ್ರೊಂಗಿ ದಿಮಿದಿಮಿದಿಮಿಕಿಟ ವ್ರ್ಯಣ ವ್ರ್ಯಣ ಪಟ್ಟವರ್ದ ವ್ರ್ಯ ಝುಂಕ್ರೈ ಝುಂಕ್ರೈ ಝುಕುಕು | ತೊದಿಗ ತದಿಗ ತದಿದಿಗಿಟ ಣ್ರ್ಯಣವೆನಲು ವಾದ್ಯ ಮದಗಜಾಸುರನ.

2. ಸಮ್ಮುಖಕೆಂದು ನಾಟ್ಯದ ಪದವನೊದರಿ.

ಕಾರಣವ ಶ್ರೀಕೃಷ್ಣಗಱುಹಬೇಕೆಂದು ತ |
ದ್ಬ್ರಿರಿ ತಾಪಸ ರೂಪನುೞಿದೇಕರೂಪಾಗಿ |
ಮಾರಾರಿ ಗಗನಗಂಗಾಧಾರಿ ಭಕ್ತಸಂಸಾರಿ ನಡೆತರುತಿರ್ದನು || ೩೬ ||

ಟೀಕು — ಕೇಳಿರೈ, ಎಲೆ ಮುನಿಗಳಿರಾ! ಜಗದ್ರಕ್ಷಕನಾದ ಮಹಾದೇವನು ತಾ ಬಂದ ವೃತ್ತಾಂತವನು ಅಱಿಯದ ಮರ್ಯಾದೆಯಲ್ಲಿ ನಾರಾಯಣಸ್ವಾಮಿಗೆ ಮಱೆಯ ಬೇಕು, ಆ ಶ್ರೀಕೃಷ್ಣಸ್ವಾಮಿಯು ಅರಮನೆಯಲ್ಲಿರ್ದ ಹದಿನಾಱು ಸಾವಿರ ಗೋಪಸ್ತ್ರೀಯರ ಮನೆಮನೆಗಳ ಮುಂದೆ ತಾನು ನಾನಾರೂಪಿನಿಂದ ಹದಿನಾಱು ಸಾಸಿರ ರೂಪ ಧರಿಸಿ, ಭಿಕ್ಷವಂ ಬೇಡಿ, ಅವರಂ ಕೃತಾರ್ಥರ ಮಾಡುತ್ತ, ಈ ಪ್ರಕಾರದಲ್ಲಿ ನಡೆದು, ಶ್ರೀ ಕೃಷ್ಣಸ್ವಾಮಿಗೆ ತಾನು ಬಂದ ಕಾರಣವನಱುಹಬೇಕೆಂದು ಮೊದಲು ಧರಿಸಿದ ನಾನಾಪ್ರಕಾರವಾದ ತಾಪಸರೂಪನುೞಿದು = ಮೊದಲು ಹಲವು ಪ್ರಕಾರವಾದನು, ತಾನೇ ಕಡೆಯಲಿ ಒಂದೆಡೆಯಾಗಿರುವುದ ತೋಱುವಂತೆ ಏಕರೂಪನಾಗಿ, ಮಾರಾರಿ = ಕಾಮನ ಕೊಂದಾತನು, ಗಂಗಾಧಾರಿ = ದೇವಗಂಗೆಯನು ಮಸ್ತಕದಲ್ಲಿ ಧರಿಸಿದಾತನು, ಭಕ್ತಸಂಸಾರಿ = ಭಕ್ತರಾಡಿದುದನಾಡಿ, ನೋಡಿದುದ ನೋಡಿ, ಹಿಡಿದುದ ಹಿಡಿದು, ಕೊಡೆಂದುದ ಕೊಟ್ಟು, ಬಿಡೆಂದುದ ಬಿಟ್ಟು, ಭಕ್ತರೇ ಸಂಸಾರವಾಗಿರುವಾತನು — ಈ ಪ್ರಕಾರವಾದ ಮಹಾದೇವನು ನಡೆತರುತಿರ್ದನು ಕಾಣಿರೈ ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ದೇವಕೀಸುತನಗ್ರಮಹಿಷಿಯರು ರುಕ್ಮಿಣೀ |
ದೇವಿಯರು |ಜಾಂಬವತಿ| ಸತ್ಯಭಾಮಾದೇವಿ |
ಭಾವೆ ನಗ್ನಜಿತೆ ಕಾಳಿಂದಿಸಿರಿದೇವಿ ಭದ್ರಾದೇವಿ ಮಿತ್ರವಿಂದಾ ||
ದೇವಿ ಸತ್ಯಾದೇವಿಯೆನಿಸಲಿಂತು ಪೆಸರಾದ |
ದೇವಿಯರು ತಾವೆಣ್ಬರವರ ಮನೆಗಳಿಗೆ ಮಾ |
ದೇವರೊಡೆಯಂ ಕ್ರಮಕ್ರಮದಿಂದೆ ಭಿಕ್ಷಮಂ ಬೇಡುತುಂ ಬರುತಿರ್ದನು||

ಟೀಕು — ಕೇಳಿರೈ, ಎಲೆ ಮುನಿಗಳಿರಾ! ಶಿವನು ಭಿಕ್ಷವ ಬೇಡಿಕೊಂಡು ಬರುತಿರಲಾಗಿ, ಮುಂದುಗಡೆಯಲ್ಲಿ ದೇವಕೀಸುತನಗ್ರಮಹಿಷಿಯರು = ದೇವಕೀ ಕುಮಾರನಾದ ಶ್ರೀ ಕೃಷ್ಣನ, ಅಗ್ರಮಹಿಷೀ = "ಪಟ್ಟಾಭಿಷಿಕ್ತಾಮಹಿಷೀ" ಎಂಬ ಭಿಧಾನದಿಂದ ಮಹಿಷಿಯೆಂದರೆ ಪಟ್ಟದಸ್ತ್ರೀ, ಆ ಪಟ್ಟದ ಸ್ತ್ರೀಯರುಗಳಾದ ರುಕ್ಮಿಣೀದೇವಿ, ಜಾಂಬವತೀದೇವಿ, ಸತ್ಯಭಾಮಾದೇವಿ, ನಗ್ನಜಿತಾದೇವಿ, ಕಾಳಿಂದಿಸೀದೇವಿ, ಭದ್ರಾದೇವಿ, ಮಿತ್ರವಿಂದಾದೇವಿ, ಸತ್ಯಾದೇವಿ ಎಂದು ಹೆಸರ ಪಡೆದ ಪಟ್ಟದ ಸ್ತ್ರೀಯರುಗಳ ಮನೆ ಮನೆಗಳಿಗೆ ಹೋಗಿ, ಮಾದೇವರೊಡೆಯನಾದ ಶಿವ

ನು ಕ್ರಮಕ್ರಮದಿಂದ ಭಿಕ್ಷಮಂ ಬೇಡುತ್ತ ಬರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಪೇಳುತಿರ್ದಾನು.

ವಾರಿಜಾಕ್ಷನ ರಾಣಿ ಸತ್ಯಭಾಮಾಂಗನೆಯು |
ಚಾರುಗೇಹಾಂಗಣದ ಮುಂದೆ ರಾರಾಜಿಸುವ |
ಪಾರಿಜಾತದ ಮರದಡಿಯು ನಿಂದು ವಿಶ್ವಮಯ ಭಿಕ್ಷಾ ಎನಲು ಕೇಳುತ ||
ನಾರಿಯರ ಸೀಮಂತಮಣಿ ಲಕ್ಷಣದ ಕಣಿ ಸ |
ದಾರಮ್ಯಗುಣಿ ಪತಿವ್ರತೆಯರಗ್ರಣಿಯೆನಿಪ | [ವಗಳು ||೩೮||
ಸ್ತ್ರೀರಮಣಿ ಮಂಚದಿಂದಿಳಿದು ಪೊಂಬಟ್ಟಲೊಳು ಭಿಕ್ಷಮಂ ತರುತಿ

ಟೀಕು — ಕೇಳಿರೈ, ಎಲೆ ಮುನಿಗಳಿರಾ! ಶಿವನು ಭಿಕ್ಷಮಂ ಬೇಡುತ್ತ ನಡೆದು ಬರುವಲ್ಲಿ ಬಂದು ತಾವಿನಲ್ಲಿ ವಾರಿಜಾಕ್ಷನ ರಾಣಿ = ಕಮಲನೇತ್ರನಾದ ವಿಷ್ಣುವಿನ ಪಟ್ಟದ ಸ್ತ್ರೀಯಾದ, ಸತ್ಯಭಾಮಾದೇವಿಯು ಮನೋಹರವಾದ ಮನೆಯ ಮುಂದಣ ಅಲಂಕಾರವಾದ ಪಾರಿಜಾತದ ವೃಕ್ಷದಡಿಯ ದೊಡ್ಡಿತಾದ ನೆಳಲಿನಲ್ಲಿ ನಿಂದು, ವಿಶ್ವಮಯ ಭಿಕ್ಷಾ ಎನ್ನಲಾಗಿ; ಆ ಧ್ವನಿಯು ಕೇಳಿ, ನಾರಿಯರ ಸೀಮಂತಮಣಿ = ಸತಿಯರ ತಲೆವಣಿಯಾದ ಆಯಕ್ಕನು, ಲಕ್ಷಣದ ಕಣಿ = ಸುಲಕ್ಷಣ ವಿಶ್ವರೂಪಾದ (?) ಆ ಯಕ್ಕನು, ಸದಾರಮ್ಯಗುಣಿ = ಎಲ್ಲ ಕಾಲದಲ್ಲೂ ಮನೋಹರವಾದ ಸುಗುಣವನೇ ತೋರುವ ಆ ಯಕ್ಕನು, ಪತಿವ್ರತೆಯರಗ್ರಣಿ = ಪತಿವ್ರತೆಯರಲ್ಲಿ ಅಗ್ರಗಣ್ಯಳಾದ ಸ್ತ್ರೀಯರ ರಮಣಿಯು, ಮಂಚದಿಂದಿಳಿದು, ಸುವರ್ಣಮಯವಾದ ಪಾತ್ರೆಯಲ್ಲಿ ಭಿಕ್ಷವನು ಪರಮೇಶ್ವರನಿಗೆ ತರುತಿರ್ದಳು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಪೇಳುತಿರ್ದಾನು.

ಮುಡಿಯು ಭಾರವ ಕೊರಲು ಕುಚಭಾರವನ್ನಸಿಯು |
ನಡು ಜಘನಭಾರವಂ ಬಟ್ಟದೊಡೆ ಪೊಜಲಾಜ |
ನೊಡೆ ಸರ್ವಭಾರಮಂ ಪೊತ್ತು ಮೆಲ್ಲಡಿ ಮೆಲ್ಲ ಮೆಲ್ಲಡಿಯಿಡುತಲವನಿಯು||
ಬಿಡದೆ ನಿಟ್ಟಿಸುತೆ ಭಿಕ್ಷವ ನೀಡಲೈತಂದು |
ಮೃಡನ ವದನಾರವಿಂದಮುಕುರದೊಳಗೆ ಬಿಂಬಿಸಿ ತೋರ್ಪ |
ಜೊಡೆ ಹರನ ಪಡಿರೂಪವಂ ಕಾಣುತುಂ ಪೆದಱಿ ತನ್ನ ಮನೆಯಂ ಪೊಕ್ಕಳು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಸತ್ಯಭಾಮಾದೇವಿಯು ಶಿವನಿಗೆ ಭಿಕ್ಷವ ತರುತಿರ್ಪಲ್ಲಿ ಮುಡಿಯು ಭಾರಕೆ ಕೊರಲು ಕೊಂಕುತಿರಲಾಗಿ, ಕುಚಗಳ ಭಾರಕ್ಕೆ ಅಸಿದಾದ ನಡು ಬಳುಕುತಿರಲಾಗಿ, ಜಘನಭಾರವನು ಬಟ್ಟದೊಡೆಗಳು ಹೊಱಲಾಱದೆ ಕಂಪಿಸುತಿರಲಾಗಿ, ಸರ್ವ ಭಾರವನೂ ಹೊತ್ತು ಪದಂಗಳು ನಡೆಯಲಾಱದೆ, ಮೆಲ್ಲಮೆಲ್ಲನೆ ಅಡಿಯಿಟ್ಟು, ನೆಲನ ನೋಡುತ್ತ ಬರುತ್ತ, ಭಿಕ್ಷವ

ನೀಡಲೆಂದು ಬಂದು, ಮೃಡನಾದ ಶಿವನ ಪಾದದ ಉಗುರುಗಳೆಂಬ ಕನ್ನಡಿಯೊಳಗೆ ಹರನ ಪ್ರತಿರೂಪವು ಬಿಂಬಿಸಲಾಗಿ, ಕಂಡು ಹೆದರಿ, ತನ್ನ ಮನೆಯನು ಹೊಕ್ಕಳು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ನಗಧರಂ [ಕಾಣುತ್ತೇನೌ ಸತ್ಯಭಾಮೆ ಹೇ ।
ಳುಗ್ರಯಿದೇನೆಂದೆನಲು ಭಿಕ್ಷಧಾರಿಯ ಪಾದ ।
ದುಗುರ್ಗಳೆಂದೆಂಬ ಕನ್ನಡಿಗಳೊಳ್ ಕಂಡೆನಾಶ್ಚರ್ಯವನದೆಂತೆಂದೊಡೆ ॥
ತೊಗಲುಡೆಯು ಹೆಗಲ ಮೇಲಣ ತ್ರಿಶೂಲದ ಹೆಣನೊ ।
ಳುಗುವ ರಕುತದ ಪಾವತೊಡಿಗೆಗಳ ರುಂಡಮಾ ।
ಲೆಗಳ ಕಾಪಾಲಿಯಿರ್ದಪ ಭಿಕ್ಷವಂ ನೀಡಲಂಜಿ ತಿರುಗಿದೆನೆಂದಳು ॥೩೦॥

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಸತ್ಯಭಾಮಾದೇವಿಯರು ಶಿವನ ಪಾದನಖದಲ್ಲಿ ಶಿವನ ಪ್ರತಿರೂಪದ ಬಿಂಬವಂ ಕಂಡು ಹೆದರಿ ತನ್ನ ಮನೆಗೆ ಬರಲಾಗಿ, ನಗಧರಂ = ಗೋವರ್ಧನ ಗಿರಿಯನು ನೆಗಹಿದಂಥ ನಾರಾಯಣಸ್ವಾಮಿಯು ಕಾಣುತ್ತೆ— ಏನೌ! ಎಲೆ ಸತ್ಯಭಾಮೇ! ಮಹಾಭೀತಿವೆರಸಿ ಬರುತಿರ್ದೆ, ಇದೇನು ಕಾರಣ? ಹೇಳು ಎನ್ನಲಾಗಿ;—ಒಬ್ಬ ಭಿಕ್ಷುಕನು ಅಂಗಳದಲ್ಲಿ ಭಿಕ್ಷಾ ಎಂದನು. ಆ ಧ್ವನಿಯನ್ನು ಕೇಳಿ ಸುವರ್ಣಪಾತ್ರೆಯಲ್ಲಿ ಭಿಕ್ಷವನು ಕೊಂಡು ನೀಡಲೆಂದು ಹೋದೆನು. ಹೋಗಲಾಗಿ ಆ ಭಿಕ್ಷಧಾರಿಯ ಪಾದದ ಉಗುರುಗಳೆಂಬ ಕನ್ನಡಿಗಳೊಳಗೆ ಒಂದು ಆಶ್ಚರ್ಯವ ಕಂಡೆ. ಉಟ್ಟ ಪುಲಿದೊಗಲುಡಿಗೆ, ಹೆಗಲ ಮೇಲಣ ತ್ರಿಶೂಲದಲ್ಲಿ ನೆತ್ತರು ಸುರಿವ ಹೆಣ, ಹಾವಿನ ತೊಡಿಗೆ, ತಲೆಗಳ ರುಂಡಮಾಲೆ, ಕೈಯ್ಯಲಿ ಭಿಕ್ಷವ ಬೇಡುವೊಡೊಂದು ಕಪಾಲ—ಇಷ್ಟು ಇರಲಾಗಿ, ಕಂಡು ತಿರುಗಿ, ಭಿಕ್ಷುಕನ ನೋಡಿ, ಭಿಕ್ಷವ ನೀಡುವುದಕ್ಕೆ ಅಂಜಿ, ಬೇಗದಲ್ಲಿ ತಿರುಗಿ ಬಂದೆನು ಕಾಣಿರೆ ಎಲೈ ಸ್ವಾಮಿ!—ಎಂದು ಸತ್ಯಭಾಮಾದೇವಿ ನಾರಾಯಣಸ್ವಾಮಿಗೆ ಬಿನ್ನಹವಂ ಮಾಡಿದಳು ಕಾಣಿರೈ, ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಬಂದನೇ ಎನ್ನ ಸಾಕ್ಷಾತ ವರಗುರುರಾಯ ।
ಬಂದನೇ ಎನ್ನಿಷ್ಟನೆನಿಪ ದೇವರದೇವ ।
ಬಂದನೇ ಎನ್ನ ದಾತಾರನೆನ್ನ [1]ಭವಾಂಧಕಾರನಿರ್ಹರಣಸೂರ[1] ॥
ಬಂದನೇ ಎನ್ನನನವರತ ಪಾಲಿಸುವಾತ ।
ಬಂದನೇ ಎನ್ನ ಭಾಗ್ಯದ ಸದಾಶಿವನೊಲಿದು ।
ಬಂದನೇ ಎನುತೆದ್ದು ಬಂದು ಶ್ರೀಶಿವನ ಮೂರ್ತಿಯ ಕಂಡನಾಕೃಷ್ಣನು ॥

---

ಪಾ—1. ದುರ್ಗಾತಿಮಿರ ನಿರ್ಹರಣಪ್ರಚಂಡಸೂರ್ಯ.

ಟೀಕು--ಕೇಳಿರೈ, ಎಲೆ ಮುನಿಗಳಿರಾ! ಸತ್ಯಭಾಮಾದೇವಿ ಹೇಳಿದ ನುಡಿಗಳನ್ನು ದೇವಕೀಕುಮಾರನಾದಂಥ ಪುರುಷೋತ್ತಮನು ಕೇಳಿ ಸಂತೋಷದಿಂದ ಹೀಗೆಂದು ನುಡಿಯುತಿರ್ದನು. ಬಂದನೇ ಎನ್ನ ಸಾಕ್ಷಾತ ವರಗುರುರಾಯ, ಬಂದನೇ ಎನಿಷ್ಟನೆನಿಪ ದೇವರದೇವ, ಬಂದನೇ ಎನ್ನ ದಾತಾರ= ಎನಗೆ ಸೃಷ್ಟಿಕರ್ತೃತ್ವವ ಕೊಟ್ಟಾತನು, ಬಂದನೇ ಎನ್ನ ಭವಾಂಧಕಾರನಿರ್ಹರಣಸೂರ= ಎನ್ನ ಜನ್ಮಾಂತರಗಳಲ್ಲಿ ಮಾಯಾರೂಪವಾದ ಕತ್ತಲೆಯ ತೊಲಗಿಸುವಲ್ಲಿ ಸೂರ್ಯನಾದಾತನು, ಬಂದನೇ ಎನ್ನ ನಾನಾಗಲೂ ಪಾಲಿಸುವ ಒಡೆಯನು, ಬಂದನೇ ಎನ್ನ ಭಾಗ್ಯದ ಸದಾಶಿವಮೂರ್ತಿ ಎಂದು ಬೇಗದಲ್ಲಿ ಎದ್ದುಬಂದು ಪರಶಿವನ ಕಂಡನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಜಡೆದಱುಬಿ[1]ನಿಂದೆ ಶೃಂಗಾರ ಶೂಲದಿ[1] ವೀರ |
ನೆಱೆ ಹಱಿಸಿ ಭಿಕ್ಷಗೆಯ್ವಲ್ಲಿ ಕರುಣಂ ಕಿಡಿಗೆ | [ವಿನಾ ||
ದಱುವ ಭಾಳಾಕ್ಷದಿಂ ರೌದ್ರ ಪುಲಿದೊವಲುಡುಗೆಯಿಂ ಹಾಸ್ಯ ಮೆಯ್ದೊಡ
ಮಱಿಹಾವಿನಿಂ ಭಯಂ ರುಂಡದಿಂ ಬೀಭತ್ಸ |
ಹೊಱಗೆಯ ಶವದಿನದ್ಭುತ ಕ್ಷಮತ್ವದಿ ಶಾಂತ |
ಮೆಱೆಯೆ ಶ್ರೀಕೃಷ್ಣ ನಿದಿರನಲಿ ನವರಸಾನ್ವಿತನಾಗಿರ್ದನೀಶನು ||೩೦

ಟೀಕು -ಕೇಳಿರೈ, ಎಲೆ ಮುನಿಗಳಿರಾ! ಆ ಪರಶಿವನ ಶ್ರೀಮನ್ನಾರಾಯಣಸ್ವಾಮಿ ನೋಡುವಾಗ ಆವ ಪ್ರಕಾರದ ಸ್ವರೂಪದಿಂದೊಪ್ಪಿರ್ದನು? ಎಂದರೆ, ಕಮೀಶ್ವರನು ನವರಸಪೂರ್ಣವಾಗಿ ಒಪ್ಪಿದನು ಎಂದು ಅಭಿವರ್ಣಿಸುತಿರ್ದನು. ಜಡೆದಱುಬಿನಿಂದೆ ಶೃಂಗಾರ =ಮಸ್ತಕದಲ್ಲಿ ಧರಿಸಿಕೊಂಡಿರ್ದ ಚಂದ್ರನ ಶೃಂಗಾರವಾದ ಕಲೆಯಿಂದ ಶೃಂಗಾರರಸ; ಶೂಲದಿ ವೀರ= ಕರಾಗ್ರದಲ್ಲಿ ಮುಮ್ಮೊನೆಯಿಂದೊಪ್ಪುವ ನಿಶಿತತ್ರಿಶೂಲದಿಂದ ವೀರರಸ; ಹಱಿಸಿ ಭಿಕ್ಷಗೆಯ್ವಲ್ಲಿ ಕರುಣಂ = ಸರ್ವರನು ಸುಖಿಯಾಗಿರಿ ಎಂದು ಹಱಸುವ್ವದಱಿಂದ ಕರುಣರಸ; ಕಿಡಿಗೆದಱುವ ಭಾಳಾಕ್ಷದಿಂ ರೌದ್ರ =ಕಿಡಿಗಳ ಕೆದಱುತಿದ್ದ ಹಣೆಗಣ್ಣಿಂದ ರೌದ್ರರಸ; ಪುಲಿದೊವಲುದುಗೆಯಿಂ ಹಾಸ್ಯ= ಒಮ್ಮುಕಾಲನಲಿ ಕೊಂದ ಹುಲಿಯ ಚರ್ಮವನುಟ್ಟುಕೊಂಡಿರುವಲ್ಲಿ, ದಿವ್ಯಾಭರಣಂಗಳಿದ್ದಾ ಹುಲಿದೊವಲನೇಕೆ ಉಟ್ಟುಕೊಂಡನೆಂಬಲ್ಲಿ ಹಾಸ್ಯರಸ; ಮಱಿಹಾವಿನಿಂ ಭಯಂ = ತೊಟ್ಟಿರ್ದ ಮಱಿಹಾವುಗಳ ಹೆಡೆಗಳ ಮೊಱೆವ ಧ್ವನಿಯಿಂದೊಪ್ಪುವ ತೊಡಿಗೆಯಿಂದ ಭಯರಸ; ರುಂಡದಿಂ ಬೀಭತ್ಸ = ತೆಱೆದ ಕಣ್ಣುಗಳಿಂದ, ಬಿಟ್ಟ ಬಾಯಿಗಳಿಂದ, ಕೆದರ್ದ ತಲೆಗಳಿಂದೊಪ್ಪುವ ರುಂಡಮಾಲೆಯ ತಲೆಗಳಿಂ ಬೀಭತ್ಸರಸ; ಹೊಱಗೆಯ ಶವದಿನದ್ಭುತ = ಶೂಲಾಗ್ರದಲ್ಲಿ ಅಚೈತನ್ಯವಾಗಿ

ಪಾ — 1. ನಿಂ ಸಿಂಗರಂ ಶೂಲದಿಂ.

ವಿರೂಪದಿಂದೊಪ್ಪುವ ಹೆಣದಿಂದದು ತರಸ; ಕ್ಷಮತ್ವದಿ ಶಾಂತ = ಕ್ಷಮಿಸುವ ಸ್ವೈರಣೆಯಿಂದ ಶಾಂತರಸ, ಶ್ರೀಕೃಷ್ಣನಿದಿರಲಿ ಒಪ್ಪುತಿರಲಾಗಿ—ನವರಸಭರಿತನಾಗಿರ್ದ ಪಾರ್ವತೀಪತಿಯನು ಶ್ರೀ ಮಹಾವಿಷ್ಣುವು ಕಂಡನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಹರನೆ ಜಯಜಯ ! ಕೃಪಾಕರನೆ ಜಯಜಯವಿಂದು |
ಧರನೆ ಜಯಜಯ ! ಉಮಾವರನೆ ಜಯಜಯ ! ಪುಣ್ಯ |
ಕರನೆ ಜಯಜಯ ! ಮನೋಹರನೆ ಜಯಜಯ ! ಪಂಚಶಿರನೆ ಜಯ
[ಜಯತು ಜಯತು ! ||
ಸ್ಥಿರನೆ ಜಯಜಯತು ! ಶಂಕರನೆ ಜಯಜಯ ! ಶೂಲ |
ಕರನೆ ಜಯಜಯ ! ಎಂದು ಪುರಮಥನನಂಘ್ರಿಯೊಳು |
ಮುರಮಥನ ನಿಜತನುವ ಪರುಸುತಿರಲಂದಿನಿರುಳಿರದೆ ತಾಂ ಕಡೆ
[ಗಂಡುದು|| ೩೨

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆನಾರಾಯಣನು ಶಿವನ ಕಂಡು ಸ್ತೋತ್ರವ ಮಾಡುತಿರ್ದಾನು. ಹರನೆ ಜಯಜಯ = ಜಗತ್ಸಂಹಾರ ಮಾಡುವಾತನೆ ಸರ್ವೋತ್ಕರ್ಷನಾಗು; ಕೃಪಾಕರನೆ ಜಯಜಯ =ದಯಾಶೀಲನಾದಾತನೆ ಜಯಜಯ; ಇಂದುಧರನೆ ಜಯಜಯ = ಚಂದ್ರಮೌಳಿಯಾದಾತನೇ ಜಯಜಯ; ಉಮಾವರನೆ ಜಯಜಯ =ಪಾರ್ವತೀ ಪ್ರಾಣಕಾಂತನಾದಾತನೇ, ಪುಣ್ಯಕರನೆ = ನುತಿಸಿ ನಮಸ್ಕರಿಸುವರಿಗೆ ಪುಣ್ಯವನು ಮಾಡುವಾತನೇ, ಮನೋಹರನಾದಾತನೇ ಜಯಜಯ; ಪಂಚಶಿರನೇ ಜಯಜಯ = ಸದ್ಯೋಜಾತ, ವಾಮದೇವ, ಅಘೋರ, ತತ್ಪುರಷ, ಈಶಾನ ಎಂಬ ಪಂಚಮುಖದಿಂದೊಪ್ಪುವಾತನೇ ಸರ್ವೋತ್ಕರ್ಷನಾಗು, ಸ್ಥಿರನೇ =ಎಂದೂ ಕೇಡಿಲ್ಲದಾತನೇ, ಶಂಕರನೆ = ಸರ್ವರಿಗೂ ಸುಖವ ಮಾಡುವಾತನೇ, ಶೂಲಕರನೇ =ತ್ರಿಶೂಲವ ಪಿಡಿದಾತನೇ, ಸರ್ವೋತ್ಕರ್ಷನಾಗೆಂದು ಮುರಮಥನ= ಮುರನೆಂಬ ರಾಕ್ಷಸನ ಕೊಂದ ಪುರುಷೋತ್ತಮನು ಪುರಮಥನ= ಮುಪ್ಪುರವ ಸುಟ್ಟಾತನ ಪದಂಗಳಿಗೆಱಗಿ = ನಮಸ್ಕರಿಸಿ, ಸ್ತೋತ್ರವ ಮಾಡುವ ವೇಳೆಗೆ, ಅಂದಿನಿರುಳಿರದೆ ತಾಂ ಕಡೆಗಂಡುದು = ಆವೇಳೆಗೆ ಬೆಳಗಾಗುವ ಸಮಯವಾಯಿತು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಹುಟ್ಟಿದೆಡೆಯೇನಲ್ಪವೇ ಶರಧಿ ತನ್ನೊಡನೆ |
ಪುಟ್ಟಿದವಳೇಂ ಬಡವೆಯೇ ಲಕ್ಷ್ಮಿ ಭಾವನಂ |
ನಿಟ್ಟಿಸುವೊಡೇಂ [1]ಜಾವಳನೆ ಲೋಕರಕ್ಷಿ ಮಾಧವನೆಂಬುದಱಿದೆನ್ನನು[1] |

ಪಾ—1. ಜಾವಳಂ ಲೋಕರಕ್ಷಣೆಯ ಮಾಡುವುದೆಂಬುದಱಿದೆನ್ನನು.

ದಿಟ್ಟತನದಿಂದೀಶ್ವರಾಲಯಂಗಳ ಮುಂದೆ |
[1]ದುಷ್ಟತಮ್ಮಡಿ ಕಚ್ಚಿ ಕೊಲುತಿಹನೆಯೆಂದು[1] ಮೊರೆ |
ಯಿಟ್ಟುಕೂಗುವವೊಲಾಮುಂಜಾವದೊಳು ಪುರದೊಳೊದಱದುವು
[ಶಂಖಂಗಳು || ೪೪

ಟೀಕು— ಕೇಳಿರೈ, ಎಲೆ ಮುನಿಗಳಿರಾ! ಆನಾರಾಯಣಸ್ವಾಮಿಯು ಶಿವನಮೂರ್ತಿಯ ನೋಡುವ ವೇಳೆಯಲ್ಲಿ ಮುಂಜಾವವಾಗಲಾಸಮಯದಲ್ಲಿ ನಾನಾದೇವಾಲಯಂಗಳಲ್ಲಿ ಶಂಖಧ್ವನಿಯಾಗುತಿರ್ದುವು; ಅವು ಹೇಗೆ ಇದ್ದುವು? ಎಂದರೆ, ಕವೀಶ್ವರನು ಆಶಂಖಂಗಳು ನೊಂದುಕೊಂಡು ಮೊರೆಯಿಡುವ ಹಾಗಿದ್ದುವು ಎಂದು ಅಭಿವರ್ಣಿಸುತಿರ್ದಾನು. ಹುಟ್ಟಿದೆಡೆಯೇನಲ್ಲವೇ, ಶರಧಿ = ತಾನು ಹುಟ್ಟಿದ ತಾವು ನೀಚಸ್ಥಾನವೇ? (ಅದು) ನವರತ್ನಂಗಳಿಗೆ ಆಶ್ರಯವಾದ ಸಮುದ್ರ. ತನ್ನೊಡನೆ ಹುಟ್ಟಿದವಳೇಂ ಬಡವೆಯೇ? ಲಕ್ಷ್ಮಿ = ತನ್ನೊಡನೆ ಹುಟ್ಟಿದ ತಮ್ಮಕ್ಕನು ಬಡವೆಯೇ? (ಅವಳು) ಮಹಾಲಕ್ಷ್ಮಿ. ಭಾವನಂ ನಿಟ್ಟಿಸುವೊಡೆ—ತಮ್ಮ ಭಾವನ ನೋಡೇನೆಂದರೆ (ಅವನು ಏಂ ಜಾವಳನೇ?) ಲೋಕರಕ್ಷಕನಾದ ಲಕ್ಷ್ಮೀಶ್ವರನಾದ ನಾರಾಯಣನು. ಹೀಗೆಂಬುದನಱಿದು ದಿಟ್ಟತನದಿಂದ ಶಿವಾಲಯಂಗಳ ಮುಂದೆ ದುಷ್ಟನಾದ ತಮ್ಮಡಿ ನನ್ನ ಕಚ್ಚಿಕೊಂಡು ಕೊಲುತಿಹನಲ್ಲಾ ಎಂದು ಮೊರೆಯಿಟ್ಟು ಕೂಗುವಹಾಗೆ ಮುಂಜಾವದಲ್ಲಿ ಪುರದ ದೇವಾಲಯಂಗಳಲ್ಲಿ ಒದಱುವ ಶಂಖಧ್ವನಿಗಳು ಈಪ್ರಕಾರದಲ್ಲಿ ಒಪ್ಪುತಿರ್ದುವು ಎಂದು ಕಪೀಶ್ವರನು ಹೇಳುತಿರ್ದಾನು.

ಮುರಮದಧ್ವಂಸಿಯೇಱಯ್ಯ ಧರಣೀಧರನೆ |
[2]ನರಕಾರಿ ಹಿರಣ್ಯಾಕ್ಷದಾನವವಿನಾಶಕನೆ[2] |
ಧರೆಯನೀರಡಿ ಮಾಡಿದನೆ ಪಾರ್ಥಿವಕುಲಾಂತಕನೇ ದಶಶಿರಮರ್ದನ ||
ದುರುಳಪ್ರಲಂಬಘ್ನ ಏಱು ಪುರಸಾಧಕನೆ |
ಧುರಗಲಿಯೆ ಕೃಷ್ಣ ಬೆಳಗಾಯಿತೇಱೆಂದೊಬ್ಬ |
ತರುಣಿಯುಪ್ಪವಡಮಂ ಹಾಡಿ [3]ಹರಿಯದಶಾವತಾರಮಂ[3] ಬಣ್ಣಿಸಿದಳು||೪೫

ಟೀಕು— ಕೇಳಿರೈ, ಎಲೆ ಮುನಿಗಳಿರಾ! ಆಬೆಳಗಿನ ಜಾವದಲ್ಲಿ ಆನಾರಾಯಣಸ್ವಾಮಿಗೆ ಉಪ್ಪವಡಿಸಬೇಕೆಂದು ಒಬ್ಬ ಗೋಪಸ್ತ್ರೀಯು ಉಪ್ಪವಡದ ಪದನ ಹಾಡಿದಳದೆಂತೆಂದೊಡೆ :—ಮುರಮದಧ್ವಂಸಿಯೇಱಯ್ಯ = ಮುರಾಸುರನ • ಕೊಂದಾತನೇ ಏಳೈಯ; ಧರಣೀಧರನೆ = ಭೂಮಿಯ ನೆಗಹಿ ರಕ್ಷಿಸಿದಾತನೇ ಏಳೈಯ, ನರಕಾರಿ

1. ದುಷ್ಟತ್ವಮಂ ಮಾಡಿ ಕಚ್ಚಿ ಕೊಲುತಿಹನೆಂದು; ಕೊಟ್ಟುತಮ್ಮಡಿ...
2. ನಿರಯದಲ್ಲಣನೆ ಹಿರಣ್ಯದಾನವನಾಶ. 3. ಕಮಲಾಕ್ಷನವತಾರಗಳ.

= ನರಕಾಸುರನನ್ನು ಕೊಂದಾತನೇ ಉಪ್ಪವಡಿಸು *; ಹಿರಣ್ಯಾರಾಕ್ಷಸನ ಕೊಂದಾತನೇ ಏಳು; ಧರೆಯುನೀರಡಿಮಾಡಿದನೇ = ಭೂಮಿಯುನೀರಡಿ ಮಾಡಿದಾತನೇ ಏಳು; ಪಾರ್ಥಿವ ಕುಲಾಂತಕನೆ = ಕ್ಷತ್ರಿಯರ ಕುಲವನ್ನು ಇಪ್ಪತ್ತೊಂದು ಸಂಹರಿಸಿದಾತನೇ, ದಶಶಿರಮರ್ದನ = ರಾವಣನ ಕೊಂದಾತನೇ, ದುರುಳಪ್ರಲಂಬಘ್ನ = ದುಷ್ಟನಾದ ಪ್ರಲಂಬನ ಸಂಹರಿಸಿದಾತನೇ ಏಳು; ಪುರಸಾಧಕನೇ = ಮುಪ್ಪುರವ ಸಾಧಿಸಿದಾತನೇ,* ಧುರಗಲಿ = ಧುರದಲ್ಲಿ ಕಲಿಯೆನಿಸಿದ, ಶ್ರೀ ಕೃಷ್ಣನೇ, ಬೆಳಗಾಯಿತೇಳೆಂದು — ಒಬ್ಬ ಸ್ತ್ರೀಯು ವಿಷ್ಣುವಿನ ದಶಾವತಾರವ ಹಾಡಿದಳು. ಅದು ಹೇಗೆಂದೊಡೆ — ತಮಾಸುರನ *ಕೊಂದಲ್ಲಿ ಮತ್ಸ್ಯಾವತಾರ; ಭೂಮಿಗೆ ಆಧಾರವಾದಲ್ಲಿ ಕೂರ್ಮಾವತಾರ; ಹಿರಣ್ಯಕಶ್ಯಪುವ ಕೊಂದಲ್ಲಿ ವರಹಾವತಾರ; ಹಿರಣ್ಯಾರಾಕ್ಷಸನ ಕೊಂದಲ್ಲಿ ನಾರಸಿಂಹಾವತಾರ; ಬಲಿಯೆಂಬ ರಾಕ್ಷಸನ ಕೊಂದಲ್ಲಿ* ವಾಮನಾವತಾರ; ಕ್ಷತ್ರಿಯರ ಕುಲ ಕೆಡಿಸುವಲ್ಲಿ ಪರಶುರಾಮಾವತಾರ; ರಾವಣಾಸುರನ ಕೊಂದಲ್ಲಿ ರಾಮಾವತಾರ; ಪ್ರಲಂಬನ ಕೊಲ್ಲುವಲ್ಲಿ ಕೃಷ್ಣಾವತಾರ; ತ್ರಿಪುರವ ಸಾಧಿಸುವಲ್ಲಿ ಬೌದ್ಧಾವತಾರ; ಕಡೆಯಲ್ಲಿ ಕಲ್ಕ್ಯವತಾರವ ತಳೆದ ದಶಾವತಾರಿಯನ್ನು (ನೋಡಿ) ಓರ್ವ ಗೋಪಾಲ ಸ್ತ್ರೀಯು ಉಪ್ಪವಡದ ಪದನ ಹಾಡಿದಳು ಎಂದು ಕವೀಶ್ವರನು ಹೇಳುತಿರ್ದಾನು.

ಒದವಿದ ತಮಂ ಪರೆಯುಲೊಡನೆ ಪರೆಯಿಸುತ ಲೋ |
ಕದ ಜನರ ನಿದ್ರಾತಮಂಧಮಂ ಸರಸಿಯೊಳು |
ಪದುಮಂಗಳೊಡನೆಯುಲರಿಸುತ ಲೋಕದ ಜನಂಗಳ ನಯನಪದುಮಂಗಳ ||
ಉದಯವಾಗಲೊಡನೆಯುದಯವಾಗಿಸುತ ಲೋ |
ಕದ ಸಮಸ್ತ ಜನಂಗಳುದ್ಯೋಗಮಂ ಕಿರಣ |
ಗೆದರುತಿಂದ್ರಾದ್ರಿಯಂ ಪತ್ತಿದನಮರಗಣಸ್ತುತ್ಯನೆನಿಪಾದಿತ್ಯನು ||೪೬||

ಟೀಕು — ಕೇಳಿರೈ, ಎಲೆ ಮುನಿಗಳಿರಾ! ಆವೇಳೆಯಲ್ಲಿ ಸೂರ್ಯೋದಯವಾಗುತಿದ್ದಿತು. ಒದವಿದ ತಮಂ ಪರೆಯುಲೊಡನೆ, ಲೋಕದೊಳಗಿರ್ದ ಜನರ ನಿದ್ರೆಯೆಂಬ ಕತ್ತಲೆಯು ಪರೆಯುಲಾಗಿ, ಕೊಳಂಗಳಲ್ಲಿದ್ದ ಪದುಮಂಗಳು ಅರಳಲಾಗಿ, ಅವರೊಡನೆ ಲೋಕದ ಜನಂಗಳ ಕಣ್ಣುಗಳೆಂಬ ಕಮಲಂಗಳು ಅರಳುತಿರೆ, ಉದಯವಾಗಲೊಡನೆ ಸಮಸ್ತ ಜನಂಗಳ ಉದ್ಯೋಗಂಗಳು ಉದಿಸುತ್ತಿರಲಾಗಿ, ಕಿರಣಂಗಳ ಕೆದರುತ್ತ ಪೂರ್ವದಿಕ್ಕಿನ ಪರ್ವತಾಗ್ರದಲ್ಲಿ ಅಮರಗಣಗಳ ಸ್ತೋತ್ರಪಾತ್ರನಾದ ಆದಿತ್ಯನು = ಸೂರ್ಯನು, ತಲೆದೋರಿದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

---

* ಈ ಗುರುತಿನ ಸ್ಥಳವಲ್ಲಿ ಈ ಪದ್ಯದ ಟೀಕೆಯಲ್ಲಿ ಬಹಳ ತಪ್ಪು ಇರುವಂತೆ ತೋರುತ್ತದೆ.

ಬಳಿಕಲಾಸಂಭ್ರಮದೊಳಡಿಗಡಿಗೆ ಸಂಭ್ರಮಿಸಿ |
ಸಲೆ ಶಿವನ ನಾಮಸ್ತವಂಮಾಡುತಿರಲು ಸಾ |
ಕೆಲೆ ಕೃಷ್ಣ ಕರದ ಬ್ರಹ್ಮ ಕಪಾಲಕಾಹುತಿಯನೀಯಬೇಕೆಂದೆನ್ನಲು ||
ಮಲಹರನೆ ಅಂತಾಗಲಿ ಮಹಾಪ್ರಸಾದವಿದ |
ನೀಯುಹಿ ನೀಂ ಚಿತ್ತೈಸುತ ವಜ್ರದ ಕಂಭ |
ದಲಿ ತನ್ನ ತಲೆಯನೊಡೆದರುಣಜಲಮಂ ಸುರಿಯುತಿರ್ದನಜಪಾತ್ರೆಯೊಳಗೆ ||

ಟೀಕು — ಕೇಳಿರೈ, ಎಲೆ ಮುನಿಗಳಿರಾ! ಸೂರ್ಯೋದಯವಾದ ಸಮಯದಲ್ಲಿ ಲಕ್ಷ್ಮೀಕಾಂತನಾದ ನಾರಾಯಣಸ್ವಾಮಿ ಸಂಭ್ರಮದೊಡನೆ ಕೂಡಿದಾತನಾಗಿ, ಸಂತಸದಿಂದ ಶಿವನಾಮಸ್ತೋತ್ರವ ಮಾಡುತಿರಲಾಗಿ, ಈಶ್ವರನು—ಸಾಕುಸಾಕು ಎಲೆ ಕೃಷ್ಣ, ನನ್ನ ಕರದಲ್ಲಿ ಇದ್ದ ಬ್ರಹ್ಮನ ಕಪಾಲಕ್ಕೆ ಆಹುತಿಯ ಮಾಡು ಎಂದು ನುಡಿಯಲಾಗಿ; ಆನಾರಾಯಣನು—ಎಲೈ ಈಶ್ವರನೇ ಮಹಾಪ್ರಸಾದ ಹಾಗೆಯಾಗಲಿ, ಪಾತ್ರೆಯ ನಿಳುಹಿ, ಚಿತ್ತೈಸುವುದು ಎಂದು ಹೇಳಲಾಗಿ; ಪಾತ್ರೆಯ ನಿಳುಹಲಾಗಿ; ಮುಂದಿರ್ದ ವಜ್ರದ ಕಂಭವಂ ಹಾಯ್ದು ತನ್ನ ತಲೆಯೊಡೆದು, ರಕ್ತಜಲಧಾರೆಯನು ಆ ಅಜಪಾತ್ರೆಯೊಳಗೆ =ಆ ಬ್ರಹ್ಮಕಪಾಲವೆಂಬ ಪಾತ್ರೆಯಲ್ಲಿ ಸುರಿಯುತ್ತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ಕರಿಯ ಬಳಿಕೆಯ್ದೆ ತೋರದಲರುಣಜಲಧಾರೆ |
ಸುರಿಸುರಿದು ತುಂಬುತಿರಲವ[1]ಕದೇ ನೊರ್ಮಡಿಸಿ[1] |
ಶಿರಪಾತ್ರೆ ಹೆಚ್ಚಿ ಬಳೆಯುತ್ತಲಿರೆ [2]ತಲೆಯ ಸಾರವೆಲ್ಲ ಪೋಯಿತೊ
ಇರದೆ ತತ್ತರಿಸಿ ಬೀಳುತಿರೆ[2] ಕೈವಿಡಿದೆತ್ತಿ | [ಇ[3]ತು ಹರಿ ||
ಯರೆಯಾದುದೀಪಾತ್ರೆಯೇನಿವಕ್ಕೆಸಲುನಾ |
ಧರೆಯ ಭಾರವನಿಳುಹಿ ಪರಿತುಷ್ಟಿಯಂ ಮಾಳ್ಪನೀಶ ಚಿತ್ತೈಸೆಂದನು[3] ||

---

ಪಾ — 1. ಕಂಡು ಬ್ರಹ್ಮನ ಸು.
2. ತತ್ಸುರಿದ ಸಾರವೆಲ್ಲವು ಪೋಗಿ ದೇಹವರಿತು ... ತರತರಿಸುತ ಬೀಳೆ.
3. ಯಿದಕೆವಿಶ್ವಭೂ | ಧರೆಯ ಭಾರವಿಳುಹುವ ಪರಿಯ ಮಾಳ್ಪನೀಶಬರದ ಚಿತ್ತೈಸೆಂದನಾಕೃಷ್ಣನು.

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆರಕ್ಷಣಕರ್ತನಾದ ನಾರಾಯಣನ ಶಿರಸ್ಸಿನಿಂದ ಆನೆಯು ಬರಿಕೈಯು ತೋರದಲ್ಲಿ ರಕ್ತಜಲಧಾರೆ ದಿವಾರಾತ್ರೆಯೆನ್ನದೆ ಸುರಿಯುತಿರಲಾಗಿ, ಆಸುರಿದು ತುಂಬಿತು ಎಂಬ ವೇಳೆಗೆ ಆ ಬ್ರಹ್ಮನ ಕಪಾಲವು ಅದಕೆ ಅದೇ ನೂರ್ಮಡಿ ಹೆಚ್ಚಿ ಬಳೆವ ಸಮಯದಲ್ಲಿ, ಆ ಪುರುಷೋತ್ತಮನು ಶರೀರದಲ್ಲಿರ್ದ ಸಾರವೆಲ್ಲವೂ ಬಱಿತು ತತ್ತರಿಸಿ ಬೀಳುತಿರ್ಪುದಂ ಶಂಕರಂ ಕಂಡು, ನಸುನಗೆಯಿಂದ ಕೈವಿಡಿದೆತ್ತಿ—ಎಲೈ ದಾವೋದರಾ! ಈಪಾತ್ರೆ ಆರೆಯಾಯಿತು, ಇದಕ್ಕೆ ಮುಂದೆ ಏನು ಎನ್ನಲಾಗಿ; ಭೂಭಾರವನಿಳುಹಿ ಇದಕ್ಕೆ ಸಂತುಷ್ಟಿಯು ಮಾಡೇನು, ನೀನು ಚಿತ್ತೈಸೆಂದು, ಶ್ರೀ ಗೋಪಾಲಸ್ವಾಮಿ ಬಿನ್ನಹ ಮಾಡಿದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ನಡೆಯೆಂದು ನಡೆವು ನಾಲ್ವತ್ತೆಂಟು ಯೋಜನಂ |
ಬಡೆವಿಪ ಕುರುಕ್ಷೇತ್ರದೆಡೆಗೆ ಬಂ[1]ದಲ್ಲಿ[1] ತ |
ನ್ನೆಡಗೆಯ್ಯನೆಡೆಗೊಂಡ ಬ್ರಹ್ಮನ ಶಿರಃಕಪಾಲವನಿಲ್ಲಿ [2]ಬಂಡಾರಿಸಿ[2] ||
ತಡೆಯದೀಪಾತ್ರೆಯಂ ತುಂಬಿ[3]ಲ್ಲಿ[3] ತುಂಬದಿ |
ರ್ದೊಡೆಯದಕ್ಕೆ ತಕ್ಕುದಂ ಮಾಱ್ಪೆನೀಮಣಿಹವಂ |
ಪೊಡವಿಯಱ[4]ಯಲು[4] ಮಾಡಿ ಬಾ ಕೃಷ್ಣನೇ ಎಂದು ಕೈಲಾಸಕೈದಿದ
[ನಭವನು || ೪೯

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆವಿಶ್ವನಾಟಕಸೂತ್ರಧಾರಿಯಾದ ಮಹಾದೇವನು ಶ್ರೀ ಕೃಷ್ಣನ ನಡೆಯೆಂದು ಕರೆದುಕೊಂಡು ಬಂದು ನಾಲ್ವತೆಂಟು ಯೋಜನ ಪರಿಪ್ರಮಾಣದಿಂದೊಪ್ಪುವ ಕುರುಕ್ಷೇತ್ರಕ್ಕೆ ಬಂದು, ಆ ಬ್ರಹ್ಮಕಪಾಲವನ್ನು ಇಲ್ಲಿ ಬಂಡಾರಿಸಿ ಈ ಪಾತ್ರೆಯು ತುಂಬಿಸೆಂದು ನಿಯಮಿಸಿ, ಇದು ತುಂಬದೆ ಇದ್ದರೆ ಇದಕ್ಕೆ ತಕ್ಕುದ ನಾನು ಮಾಡೇನು, ನೀನು ಈ ಭೂಮಿಯಲ್ಲಿ ಅಱಿವ ಮರ್ಯಾದೆಯಿಂದ ಈಮಣಿಹವನು ಮಾಡಿ ಬಾರೆಂದು ಶ್ರೀ ಗೋಪಾಲಕೃಷ್ಣಂಗೆ ನಿರೂಪಿಸಿ,

ಅಬಳಿಕ ಭಕ್ತಜನ ಲೀಲಾಲೋಲಚಿತ್ತನು ಚತುರ್ದಶಭುವನಾರಾಧ್ಯನು ಕಾರುಣ್ಯಾವಾರಾಶಿ ಕರುಣಾಳುಗಳ ದೇವನು ತ್ರಿಶೂಲಮಂ ತಿರುಹುತ್ತ, ನಡುವಿನೊಳಗಣ ಘಂಟೆ ಢಣಢಣವೆನ್ನಲು, ಕರದ ಡಮರುಗ ಢಮ್ಮೆಂದು ನುಡಿಸುತ್ತ, ಕೈಲಾಸಕ್ಕೆ ನಡೆದು ಬರುವಲ್ಲಿ—ಧೂಮಾಂಗನೆಂಬ ಗಣೇಶ್ವರನು ಸಹಸ್ರ ಯೋಜನದ ಸತ್ತಿಗೆಯಂ ಪಿಡಿಯೆ, ಪರಂಜ್ಯೋತಿ ಗಣೇಶ್ವರನು ಚಾಮರವನಿಡಲು, ಶಿತಿಕಂಠನೆಂಬ ಗಣೇಶ್ವರನು ಸೀಗುರಿಯನಿಕ್ಕಲು, ನಂದಿ ಮದ್ದಳೆಯ ನುಡಿಸೆ, ದೇವದುಂ

ಪಾ—1. ದಂದು. 2. ಬಂಡಿರಿಸಿ. 3. ಲ್ಲ. 4. ವ್ರೊಲು.

ದುಭಿ ಮೊಳಗೆ, ನರರು ನಲಿಯೆ, ನಾಗರ್ಕಳಚ್ಚರಿಸೆ, ಸುರರು ಸುಮ್ಮಾನಿಸೆ, ಪ್ರಮಥಗಣಂಗಳು ಕುಣಿದಾಡೆ, ರುದ್ರಗಣಂಗಳು ಪಾಡುತಿರಲಾಗಿ, ವಿನುತಜಗತ್ಕಲ್ಪವೃಕ್ಷನು ಕಾಮಿತಜನಕಾಮಧೇನುವು ಭಕ್ತಜನಬಾಂಧವನು ಕೈಲಾಸಕ್ಕೆ ನಡೆತರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಭುವನನೊಳಗಾದಿಯಲಿ ಜನಿಸಿದನು ಬ್ರಹ್ಮನಿಂ |
ದವೆ ನವಬ್ರಹ್ಮರವರೊಳಗತ್ರಿಯತ್ರಿಸಂ |
ಭವ ಸೋಮ ಸೋಮನಿಂ ಬುಧ ಬುಧಾತ್ಮಜ ಪುರೂರವನಾಪುರೂರವ [ನೊಳು ||
ದ್ಭವಿಸಿದಂ ನಹುಷನಾನಹುಷನಿಂದೆ ಯಯಾತಿ |
ಯುವಗೆ[1] ಮತ್ಸ್ನವೆ ಮತ್ಸ್ನವಾತ್ಮಭವ[1] ಭರತನೆಂ |
ಬವನವಗೆ ಸಹೋತ್ರಿಸಹೋತ್ರಿಯಿಂದವೆ ಹಸ್ತಿನಾಪುರವನಾಳ್ದ ಹಸ್ತಿ ||

ಟೀಕು— ಕೇಳಿರೈ ಎ... ...! ಕುರುವಂಶವಾವ ಪ್ರಕಾರವೆಂದರೆ— ಆದಿಸೃಷ್ಟಿಯಲಿ ಶಿವನ ... ಲ್ಲಿ ಬ್ರಹ್ಮ ಹುಟ್ಟಿದ; ಆಬ್ರಹ್ಮನಿಂದ ಮರೀಚಿ, ಅತ್ರಿ, ಅಂಗಿರಸ, ಪೌಲಸ್ತ್ಯ, ...ಲೋಹ, ಕ್ರತು, ದಕ್ಷ, ಕಶ್ಯಪ, ಭೃಗು ಮೊದಲಾದ ನವಬ್ರಹ್ಮರುಗಳಾದರು ; ಅವರೊಳಗೆ ಅತ್ರಿಸಂಭವನು ಸೋಮನು; ಸೋಮನಿಂದ ಬುಧನಾದ; ಬುಧನಿಂದ ಪುರೂರವನಾದ; ಪುರೂರವನಿಂದ ನಹುಷನಾದ; ನಹುಷನಿಂದ ಯಯಾತಿಯಾದ; ಯಯಾತಿಯಿಂದ [1] ಮತ್ಸ್ನವನಾದ; ಮತ್ಸ್ನವನಿಂದ[1] ಭರತನಾದ; ಭರತನಿಂದ ಸಹೋತ್ರಿಯಾದ; ಸಹೋತ್ರಿಯಿಂದ ಹಸ್ತಿಯಾದ; ಆಹಸ್ತಿಯೆಂಬಾತನು ತನ್ನ ಹೆಸರಿನಿಂದ ಹಸ್ತಿನಾಪುರವೆಂಬ ಪಟ್ಟಣವ ಕಟ್ಟಿಸಿ ಆಳಿಕೊಂಡಿರುತಿರ್ದನು ಕಾಣಿರೈ ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಅವನಿಂದ ಕುರು ಕುರುವಿನಿಂದೆ ಪೃಥ್ವೀಶನೆಂ |
ಬವನವನ ಸುತ ಶಾಂತ†ಶಾಂತನಿಂ ಸಂಭವಿಸಿ |
ದವನುಂ ವಿಚಿತ್ರವೀರಿಯನವನ ನಂದನರು ಧೃತರಾಷ್ಟ್ರ ಪಾಂಡುನೃಪರು||
ಅವರ ಮಕ್ಕಳು ಕೌರವರು ಪಾಂಡವರು ಮುನ್ನಿ |
ನವರಿಂದೆ ಸೋಮವಂಶದ ರಾಯರುಗಳೊಳೊ |
ಪ್ಪುವ ಸತ್ಕುಲಪ್ರದೀಪಕರೆನಿಸಿ ಸಕಲ ಸಾಮ್ರಾಜ್ಯವಾಳುತ್ತಿರ್ದರು ||

---

ಪಾ—1. ಪುರುತ್ಸ್ನಪುರುತ್ಸ್ನಾತ್ಮಭವ ಯುತ್ಸ್ನವ ಯುತ್ಸ್ನವಗೆ.

† ಶಂತನು ಎಂದು ಪ್ರಸಿದ್ಧಿಯಿದೆ ; ಶಾಂತನೆಂದು ಎಲ್ಲೂ ಕೇಳಿಲ್ಲ.

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಹಸ್ತಿಯೆಂಬವನಿಂದ ಕುರುವೆಂಬಾತನಾದ; ಆಕುರುರಾಯನಿಂದ ಪೃಥ್ವೀಶನೆಂಬವನಾದ; ಆಪೃಥ್ವೀಶನಿಂದ ಶಾಂತರಾಯನಾದ; ಆಶಾಂತರಾಯನಿಂದ ವಿಚಿತ್ರವೀರ್ಯನಾದನು; ಆವಿಚಿತ್ರವೀರ್ಯನಿಂದ ಧೃತರಾಷ್ಟ್ರ, ಪಾಂಡುನೃಪಾಲರು ಆದರು; ಅವರ ಮಕ್ಕಳು ಕೌರವಪಾಂಡವರಾದರು. ಮುನ್ನಿನವರಿಗಿಂತ ಹೆಚ್ಚಾಗಿ ಸೋಮವಂಶದ ರಾಯರುಗಳೊಳು ಒಪ್ಪುವ ಸತ್ಕುಲಪ್ರದೀಪಕರೆನಿಸಿ ಅವರು ರಾಜ್ಯವನಾಳುತಿರ್ದರು, ಕಾಣಿರೈ ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಹರನಾಜ್ಞೆಯಿಂ ಕೃಷ್ಣನಂದು ಕೌರವಪಾಂಡ |
ವರೊಳು ದಾಯಾದವಿಷಯದ ಕದನಮಂ ¹ಬೆಳಸಿ¹ |
ನರನ ಸಾರಥಿಯಾಗಿಯಷ್ಟಾದಶಾಕ್ಷೋಹಿಣೀಬಲವ ಸಂಹರಿಸೆ ||
ಕುರುಭೂಮಿಯೊಳಗೇಳು ತಾಳೆಮರದುದ್ದ ನೆ |
ತ್ತರು ಪರಿಯೆ ಪಾತ್ರೆ ²ದುಂಬಿ²ಯೊಡೆದಾಗಸದ ಮೇಲೆ |
ಪ್ಪರಸಲ್ಲಿಗೆಯ್ದುವುದುಂ ಗಗನಕಿಡೆ [illegible] ³ತಿರುವ³ ತಿರುಗುತಿಹುದು ||

ಟೀಕು—ಕೇಳಿರೈ, ಎಲೆ ಮುನಿಗಳಿರಾ! [illegible] ರವ ಮಾಡುವ ಹರನಾಜ್ಞೆಯಿಂದ ದೇವಕೀಕುಮಾರನಾದ ಕೃಷ್ಣನು ಧೃತರಾಷ್ಟ್ರಕುಮಾರರಾದ ಕೌರವಮೊದಲಾದ ನೂರ್ಮಂದು ಕುಮಾರರಿಗೂ ಪಾಂಡುರಾಯನ ಕುಮಾರರಾದ ಧರ್ಮರಾಯ ಮೊದಲಾದ ಪಾಂಡವರಿಗೂ ದಾಯಾದ ವಿಷಯದಿಂದ ಕದನವ ಬಳೆಸಿ, ತಾನು ಅರ್ಜುನನಿಗೆ ಸಾರಥಿಯಾಗಿ, ಅಷ್ಟಾದಶಾಕ್ಷೋಹಿಣೀಬಲವ ಸಂಹಾರಮಾಡೆ; ಕುರುಭೂಮಿಯೊಳಗೇಳು ತಾಳೆಯ ಮರದುದ್ದ ನೆತ್ತರು ಪರಿದೂ ಪಾತ್ರೆ ⁴ತುಂಬಿ⁴ದುದಾಗಿ; ಅದಮಾಯದಲ್ಲಿ ಪುಷ್ಕರನು ಅಲ್ಲಿಗೆ ಬಂದು ಆಪಾತ್ರೆಯಂ ತೆಗೆದು ಗಗನಕ್ಕಿಡಲಾಗಿ; ಅದು ಘಡಿಘಡಿಸುತ್ತ ಉರಿಯುಸುಗುತ್ತ ಸಿಡಿಲಾಗಿ, ಆಕಾಶದಲ್ಲಿ ತಿರುಗುತಿದ್ದಿತು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದಾನು.

ಅಂಬರವನೆಡೆಗೊಂಡು ತಾಳಮೇಘಂಗಳಂ |
ದೆಂಬ ಪೆರ್ಮುಗಿಲ್ಗಳಂ ಪೆರ್ಚಿದಂತಾದಾರ |
ಗೊಂಬುತಿರಲಿಂದಜನ ಪಾತ್ರೆಗಾಜ್ಞೆಯಂ ಮಾಡುತಲ್ಲಿಂದ ಮರಳಿ ||
ಅಂಬುಜೋದರನುಮಂ ಪೂಜಿಸಿ ಬೀಳ್ಕೊಂಡು ಬಳಿ |
ಕಂಬಿಕಾವರನಘಮುಕರನಪ್ರತಿಮಗೋಕ |
ದಂಬನಲ್ಲಭನ ಬೆನ್ನಡಿ ನಡೆತಂದು ಕೈಲಾಸಪುರವಂ ಪೊಕ್ಕನು || ೨೧

ಪಾ—1. ಬೆರಸಿ. 2. ದುಂಬಿ. 3. ತುರುವ. 4. ತುಂಬಿ.

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆಕಾಶವನೆಡೆಗೊಂಡ ಆ ಬ್ರಹ್ಮನ ಕಪಾಲಕ್ಕೆ ನೀನು ಈ ಆಕಾಶದಲ್ಲಿದ್ದುಕೊಂಡು ಕಾಳಮೇಘ ಮೊದಲಾದ ಮೇಘಂಗಳಿಂ ಪೆರ್ಮಳೆಗಳು ಕರೆದರೆ ಆ ಉದಕಂಗಳು ಹೆಚ್ಚಿದಹಾಗೆ ಆ ಉದಕಂಗಳನೆ ಆಹಾರವ ಕೊಂಡು ನೀನಿರು ಎಂದು ಆ ಬ್ರಹ್ಮನ ಕಪಾಲಕ್ಕೆ ಆಜ್ಞೆಯಂ ಮಾಡಿ, ಅಲ್ಲಿಂದ ಮರಳಿ, ನಾರಾಯಣನಿದ್ದಲ್ಲಿಗೆ ಬಂದು, ಆತಂಗೆ ಹರಸಿ, ನಿನ್ನಿಂದ ಬ್ರಹ್ಮನ ಕಪಾಲಕ್ಕೆ ಆಹುತಿಯಾಯಿತೆಂದು, ಆತನ ದ್ವಾರಕಾಪುರಕ್ಕೆ ಕಳುಹಿದಬಳಿಕ ಅಂಬಿಕಾರಮಣನು ಅಭಯಕರನು ಅಪ್ರತಿಮನು ನಿರ್ವಿಕಲ್ಪನು ನಿರಾಮಯನು ಧರ್ಮರೂಪಾದ ಬಸವೇಶ್ವರನ ಬೆನ್ನೊಳವತರಿಸಿ, ಪರಮೇಶ್ವರನು ರುದ್ರಗಣಂಗಳು ಪ್ರಮಥಗಣಂಗಳು ವೀರಗಣಂಗಳು ಸಮೇತವಾಗಿ, ಎತ್ತಿದ ವೃಷಭಧ್ವಜಂಗಳಿಂದ, ಹೊಡೆವ ದೇವದುಂದುಭಿಗಳಿಂದ ಸರ್ವ ಸಂಭ್ರಮದಿಂದ ಕೈಲಾಸಪುರಮಂ ಪೊಕ್ಕು, ದೇವಿಯರೊಡನೆ ವಿನೋದದಿಂದ ಶಿವನು ಸುಖದಲ್ಲಿದ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಪೇಳುತಿರ್ದನು.

ಭಾರತವ ಮಡುಹಿ ಭೂಮಿಯನಿಳುಹಿ ಸರ್ವ |
ಧಾರಿಣೀಶ್ವರಪಟ್ಟಮಂ ಧರ್ಮಜಗದ ಕಟ್ಟಿ |
ಚಾರುಲಗ್ನದೊಳು ಪಾಂಡುಕುಮಾರರನಿಬರಂ ಹಸ್ತಿನಾಪುರದೊಳಿರಿಸಿ ||
ಕೌರವನಿಗೀಶ[1]ನನುವಿಡಿದಿನ್ನು[1] ಸೌಖ್ಯಮಂ |
ಸೇರಿಸುವೆನೆಂದು [2]ಮನಸಂದು[2] ನಡೆತಂದು ತಾ |
ದ್ವಾರಾವತಿಗೆ ಬಂದು ಕೃಷ್ಣನತ್ಯಧಿಕ [3]ಸಂರಂಭ[3]ದಿಂದಿರುತಿರ್ದನು ||೫೪||

ಟೀಕು—ಕೇಳಿರೈ, ಎಲೆ ಮುನಿಗಳಿರಾ! ಆ ಪರಮೇಶ್ವರನು ಭಿಕ್ಷಾಟನದ ಲೀಲೆಯನುಳಿದು, ಕೈಲಾಸದೊಳಗಿರ್ದನು. ಇತ್ತಲಾ ನಾರಾಯಣಸ್ವಾಮಿಯು ಭಾರತವ ಮಡುಹಿ, ನೂರೊಂದು ಕುಮಾರರನು ಅಕ್ಷೋಹಿಣಿ ಮಾರ್ಬಲವನು ಸಂಹಾರಮಾಡಿ, ಬ್ರಹ್ಮನ ಕಪಾಲವ ತುಂಬಿಸಿ, ಭೂಮಿಯ ಭಾರವನಿಳುಹಿ, ಧರ್ಮರಾಯಂಗೆ ಶುಭಲಗ್ನದಲ್ಲಿ ಸಕಲರಾಜ್ಯದ ಪಟ್ಟವಮಂ ಕಟ್ಟಿ, ಭೀಮಾರ್ಜುನ ನಕುಲ ಸಹದೇವರೆಂಬ ಪಾಂಡುಕುಮಾರರಂ ಹಸ್ತಿನಾಪುರದೊಳಿರಿಸಿ, ಆ ತದನಂತರದಲ್ಲಿ ಆ ಕೌರವನಿಗೆ ಈಶ್ವರನಿಂದ ಸೌಖ್ಯವಾಗಿಸಬೇಕೆಂದು ಚಿತ್ತದಲ್ಲಿ ನೆನೆದು, ಆ ಶ್ರೀಮನ್ನಾರಾಯಣನು ದ್ವಾರಾವತಿಗೆ ಬಂದು, ಅತ್ಯಂತ ಸಂಭ್ರಮದಿಂದ ಸುಖಸಂಕಥಾ ವಿನೋದಗಳಿಂದ ಇರುತಿರ್ದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

---

ಪಾ—1. ಶ್ವರನ ಪಿಡಿದಿನ್ನು. 2. ಮನಬಂದು. 3. ಸೌಭಾಗ್ಯ.

ಹಲವು ಕಾಲದ ಮೇಲೆ ಮುನಿಯಿತ್ತ ಶಾಪದಿಂ ।
ಹುಲುಬೇಡನಂಬಿಂದ ಕೃಷ್ಣಾವತಾರವಳಿ ।
ಬಳಿಕ ಧರ್ಮಜಂ ಹಸ್ತಿನಾಪುರವನಾಳುತಿರೆ ಮೂವತ್ತುವರುಷ ।
ಗಂ ಬರೆ ಪರೀಕ್ಷಿತಗೆ ಪಟ್ಟವ ಕಟ್ಟಿ ।
ಭೀಮಾರ್ಜುನರು ಯಮಳರೊಡೆವೆರಸಿ ।
[1]ಉತ್ತರಾಭಿಮುಖವಾಗಿ ಹಿಮವಂ ದಾಂಟಿ ನಾರಾಯಣನ ಕಂಡನು[1] ॥

ಟೀಕು.—ಕೇಳಿರೈ, ಎಲೆ ಮುನಿಗಳಿರಾ! ಈ ಪ್ರಕಾರದಲ್ಲಿ ದ್ವಾರಕಾಪುರದ ದೇವಕೀಕುಮಾರನು ಹದಿನಾರುಸಾವಿರ ಗೋಪಸ್ತ್ರೀಯರೊಡನೆ ಸುಖದೊಳಿರ್ದನು. ಹಲವು ಕಾಲದಿಂ ಮೇಲೆ ದೂರ್ವಾಸನಿತ್ತ ಶಾಪದಿಂದ ಹುಲುಬೇಡನಬಂದ ಕೃಷ್ಣಾವತಾರ ಸಂಪೂರ್ಣವಾಗಲಾಗಿ, ಆ ಬಳಿಕ ಹಸ್ತಿನಾಪುರದಲ್ಲಿ ಧರ್ಮರಾಯನು ಮೂವತ್ತು ವರುಷ ಪರಿಯಂತ ರಾಜ್ಯವನಾಳಿ, ಕಲಿಯು ಪ್ರವೇಶಿಸಲಾಗಿ ಧರ್ಮಶೀಲರು ಅಧರ್ಮಯುಗದಲ್ಲಿದ್ದರೆ ಧರ್ಮಕ್ಕೆ ಹಾನಿ ಬಹುದೆಂದು ತಿಳಿದು ಪರೀಕ್ಷಿತರಾಯಂಗೆ ಪಟ್ಟವಂ ಕಟ್ಟಿ ದ್ರೌಪದಿ ಭೀಮಾರ್ಜುನ ನಕುಲ ಸಹದೇವ ಸಮೇತನಾಗಿ ಉತ್ತರಾಭಿಮುಖವಾಗಿ ನಡೆದು, ಹಿಮವಂ ದಾಂಟಿಹೋಗುವ ಸಮಯದಲ್ಲಿ (ಅವರು ಸಾಯಲು ಅವರನ್ನು ಬಿಡು ತಾನೊಬ್ಬನೇ ಹೋಗುತ್ತ) ನಾರಾಯಣಸ್ವಾಮಿ ಪ್ರಸನ್ನನಾಗಲಾಗಿ, ಕಂಡು ನಮಿಸಿ, ಸ್ತುತಿಸಿದನು ಕಾಣಿರೈ, ಎಲೆ ಮುನಿಗಳಿರಾ! ಎಂದು ಸೂತಮುನೀಶ್ವರನು ಹೇಳುತಿರ್ದನು.

ಧರಣಿಪನನಪ್ಪಿ ಧರ್ಮಕುಮಾರಗನುಜರನು ।
ತರುಣಿ ಪಾಂಚಾಲಿಯುಂ ತೋರುತುಂ ಕೈಲಾಸ ।
ಪುರಕುಯ್ದು ಶಿವನ ಕಾಣಿಸೆ ಯುಧಿಷ್ಠಿರನಭೀಷ್ಟಾರ್ಥವಂ ಕೈಸೇರಿಸಿ ॥
ಪರಿಯ ಬಿನ್ನಹವ ಲಾಲಿಸಿ ಕೃಪಾದೃಷ್ಟಿಯಿಂ ।
ಕುರುರಾಜಗೆ ವಸಂತ ರಾಜ್ಯವಂ* ಕೊಟ್ಟು ಶಂ ।
ಕರನು ಸಕಲೋರ್ವಿಯಂ ಪಾಲಿಸುತ ರಜತಾಚಲಾಗ್ರದೊಳಗಿರುತಿರ್ದನು ॥

ಟೀಕು.—ಕೇಳಿರೈ, ಎಲೆ ಮುನಿಗಳಿರಾ! ಧರ್ಮರಾಯನ ಧರ್ಮವರ್ತನೆಗೆ ನಾರಾಯಣನು ಪ್ರಸನ್ನನಾಗಿ, "ಮಮ ಪ್ರಾಣಾ ಹಿ ಪಾಂಡವಾಃ" ಎಂಬ ಸ್ಮೃತಿ (ತಕ್ಕಂತೆ) ಧರ್ಮರಾಯನ ಬಿಗಿಬಿಗಿದು ಆಲಿಂಗಿಸಿಕೊಂಡು, ಭೀಮಾರ್ಜುನ ನಕು

---

ಪಾ—1. ಮೂರು ಪ್ರತಿಯಲ್ಲಿಯೂ ಇದೇಪಾಠವಿದೆ "ಸಲೆ ನಡೆದು ಬಳಿಕ ನಡೆದು ಹಿಮವಂ ದಾಂಟಿ ನಾರಾಯಣನ ಕಂಡನು." ಎಂದು ಇದ್ದರೆ, ಪ್ರಾಸದಲ್ಲಿಯೂ ತಪ್ಪಿರುವುದಿಲ್ಲ, ಮುಂದಣ ಪದ್ಯದ ಕಥೆಗೂ ಸರಿಹೋಗುತ್ತದೆ.

ಸಹದೇವ ದ್ರೌಪದಿಯರ ತೋಱಿಕೊಟ್ಟು ಸಂತೈಸಿ, ಕೈಲಾಸಪುರಕ್ಕೆ ಒಡಗೊಂಡು ಬಂದು, ಶಿವನ ಕಾಣಿಸಿ, ಶಿವಂಗೆ ಬಿನ್ನೈಸಿ ಧರ್ಮರಾಯಂಗೆ ಇಷ್ಟಾರ್ಥಮಂ ಕೊಡಿಸಿ, ಕೌರವನ ಪಾತಕವ ತೊಲಗಿಸಿ, ವಸಂತರಾಜ್ಯವಂ * ಕೌರವಂಗೆ ಕೊಡಿಸಿ, ನಾರಾಯಣಸ್ವಾಮಿ ವೈಕುಂಠಕ್ಕೆ ಹೋಗಲಾಗಿ ; ಶಂಕರನು ರಜತಾಚಲಾಗ್ರದಲ್ಲಿ ಸಕಲ ಲೋಕಂಗಳನು ಪಾಲಿಸುತಿರ್ದನು ಕಣಿರೈ, ಎಲೆ ಮುನಿಗಳಿರಾ! ಎಂದು ಸೂತಪೌರಾಣಿಕನು ಹೇಳುತಿರ್ದನು.

[1]ಇಂದು ನಾಂ ಕೃತಕೃತ್ಯರಾದೆವೀಶ್ವರನಸೊಂ |
ದಂದವಂ[1] ನೀಂ ನಮಗೆ ವಿರಚಿಸಿದೆಯಾಗಿನ್ನು |
ಸಂದೇಹವೇನು ಬದುಕಿದೆವೆಂದು ಸನಕಾದಿ ಮುನಿಗಳಾನಂದದಿಂದ ||
ವಂದಿಸಲು ಕೈಮುಗಿಯುತವರವರುಚಿತೋಕ್ತಿ |
ಯಿಂದೆ ಮನ್ನಿಸುತ ಬೀಳ್ಕೊಂಡು ಸೂತಮುನೀಂದ್ರ |
[2]ನಂದು[2]ಮಹಾಮೇರುವಿನ |ಪೊರೆಯೊಳಿಹ| ಪುಣ್ಯಾಶ್ರಮವನೆಯ್ದಿ
|ಸುಖವಿರ್ದನು || ೨೪

ಟೀಕು—ಈ ಪ್ರಕಾರದಲ್ಲಿ ನೈಮಿಶಾರಣ್ಯವಾಸಿಗಳಾದ ಮುನಿಗಳಿಗೆ ಸೂತ ಮುನೀಶ್ವರನು ಶಿವನ ಭಿಕ್ಷಾಟನದ ಲೀಲೆಯಂ ಪೇಳಲಾಗಿ; ಆಮುನಿಗಳು ಸಂತಸದಿಂದ ಸೂತಮುನೀಶ್ವರಂಗೆ ಬಿನ್ನಹಮಾಡುತಿರ್ದರು— ಎಲೆ ಸೂತ ಮುನೀಶ್ವರ! ಇಂದು ನಾವು ಕೃತಕೃತ್ಯರಾದೆವು, ನಮಗೆ ಶಿವಕಥಾಮೃತವನ್ನು ನೀವು ಹೇಳಿದಿರಿ, ನಾವು ಬದುಕಿದೆವೆಂದು, ಸನಕಾದಿ ಮುನಿಗಳು ಆನಂದದಿಂದ ವಂದಿಸಲಾಗಿ; ಅವರವರಿಗೆ ಕೈಮುಗಿದು ವಂದಿಸಿ, ಅವರವರ ಆಶ್ರಮಕ್ಕೆ ಉಚಿತವಾದ ಮಾತುಗಳನಾಡಿ ಕಳುಹಿಸಿ, ಪೌರಾಣಿಕೋತ್ತಮನಾದ ಸೂತಮಹಾಮುನೀಂದ್ರನು ಮಹಾಮೇರುವಿನ ಹೊಱವಳಯದೊಳಿರ್ದ ತನ್ನ ಪುಣ್ಯಾಶ್ರಮಕ್ಕೆ ಬಂದು ಈಶ್ವರನ ಆರಾಧನೆಯಿಂದ ಸುಖದೊಳಿರುತಿರ್ದನು ಎಂದು ಕವೀಶ್ವರನು ಹೇಳುತಿರ್ದನು.

---

* ವಸಂತರಾಜ್ಯವೆಂದರೆ ಅರ್ಥವಾಗುವುದಿಲ್ಲ. "ಕುರುರಾಜಗೆಸೆವ ಸ್ವಾರಾಜ್ಯವಂ ಕೊಟ್ಟು" ಎಂಬಿದ್ದರೆ, ಕೌರವನಿಗೆ ತನ್ನ ಸ್ವಾರಾಜ್ಯವಂ ಎಂದರೆ ಕೈಲಾಸ ಸುಖವನ್ನು ದಯಪಾಲಿಸಿ, ಎಂಬ ಅರ್ಥವು ಉಂಟಾಗುತ್ತದೆ.

ಬ—1. ಇಂದಾವು ಕೃತಕೃತ್ಯರಾದೆವೈ ಶಿವಕಥಾನಂದವಮಂ.

2. ನೆಂದು.

ಕ್ಷಿತಿಯೊಳ್ ಭಿಕ್ಷಾಟನದ ಚರಿತೆಯೆಂಬ ಸ |
ತ್ಕೃತಿಯ ಮುದದಿಂದೋ[ದಿ ಪೇಳ್ದವರ್ಗೆ ಕೇಳ್ದವರ್ಗೆ] |
ಪ್ರತಿಯ ಬರೆದವರ್ಗಾಯುರಾರೋಗ್ಯಮೈಶ್ವರ್ಯವನ್ನೀವನಭವನೆಂದು ||
²ಶ್ರುತಿಯುಮತವಿದು ಪುರಾತನವಚನ ಋಷ್ಯುಕ್ತ |
ಕಥನಮಿದು ಶಿವಪುರಾಣಾರ್ಥವೆಂದಱಿದಱಿದು² ||
ಚತುರರಾಹಾ! ಎಂದು ಪೊಗೞೆ³ ಕವಿರಾಯಗುರುಲಿಂಗವಿಭು ರಚಿಯಿಸಿದನು ||

ಟೀಕು — ಕ್ಷಿತಿಯೊಳ್ ಭಿಕ್ಷಾಟನದ ಚರಿತೆಯಂ = ಈ ಭೂಮಿಯಲ್ಲಿ ಶಿವನ ಭಿಕ್ಷಾಟನದ ಚರಿತೆಯೆಂಬ ಸತ್ಕಥೆಯನ್ನು ಸಂತಸದಿಂದ ರಾಗರಚನೆಯಲಿ ಓದಿದವರಿಗೆ, ಇಲ್ಲಿ ಇದ್ದ ಶಬ್ದ ಅರ್ಥಂಗಳು ಎಲ್ಲರು ಅಱಿವ ಮರ್ಯಾದೆಯಿಂದ ಹೇಳಿದವರಿಗೆ, ಭಕ್ತಿಯಿಂದ ಕೇಳಿದವರಿಗೆ ಸಮಾನವಾಗಿ ವ್ಯಂಜನ ವಿಸರ್ಗಂಗಳ ಬಿಡದೆ ಅಕ್ಷರವ್ಯಕ್ತವಾಗಿ ಬರೆದವರಿಗೆ ಶಿವನು ಆಯುರಾರೋಗ್ಯ ಐಶ್ವರ್ಯವಿಷ್ಟನ್ನೂ ಪಾಲಿಸುವನು. ಇದು ಶ್ರುತಿಯ ಮತ, ಇದು ಪುರಾತನರ ವಚನ, ಇದು ಋಷಿ ಪ್ರೋಕ್ತ, ಇದು ಶಿವಪುರಾಣಾರ್ಥವೆಂದಱಿದಱಿದು ಚತುರರು ಆಹಾ! ಎಂದು ಹೊಗಳುವಂತೆ, ಕವೀಶ್ವರನಾದ ಗುರುಲಿಂಗದೇವರು ಬಿನ್ನಹವಂ ಮಾಡಿದನು; ಶಿವಭಕ್ತರುಗಳು ಕೇಳಿ ಕರುಣಿಸುವುದು ಎಂದು ಕವೀಶ್ವರನು ಬಿನ್ನಹವಂ ಮಾಡುತಿರ್ದಾನು.

ಸ್ಥಿರಶಾಸನವಿದೆನಿಸಿ ಮೆಱೆವ ಭಿಕ್ಷಾಟನದ |
ಚರಿತೆಗಧಿಪತಿಯಾದ ಪರಮೇಶ್ವರಂ ಜಗ |
ದ್ಭರಿತನಾಗಿಪನೆಂತದೆನಲು ಗೋಪಾಂಗನೆಯರ ಮನೆ ಮನೆದಪ್ಪದೆ ||
ವರಕೃಷ್ಣನಿಪನನೆಂತೆನಲು ಗುರುಲಿಂಗವಿಭು |
²ಪರುಷದಿಂ ರಚಿಸಿದೀಮೋಹಕೃತಿ ರಸಿಕರಾ |
ಭರಣ ಭಾವುಕರ² ಕೋವಿದರ ³ಮನವ[ನೊಳಕೊಂಡತಿ] ಸೊಬಗ³
[ಬೀಱುತಿಹುದು|| ೫೮

ಪಾ—1. ಶ್ರುತಿಮತಪಿದಿದು ಪುರಾತನಋಷಿಪ್ರೋಕ್ತಮಹ ಕಥನಮಂ ಶಿವಪುರಾಣೋಕ್ತಂಗಳೆಂದರಿತು. 2. ವಿರಚಿಸಿದ ಸತ್ಕೃತಿಯು ಮೋಹನದ ರಸಿಕರ್ಗೆ | ವರಭಾವಕರಣ 3. ಮನವನಿಂಬುಗೊಂಡದು ಸೊಗಸ.

ಟೀಕು – ಈ ಭೂಮಿಯಲ್ಲಿ ಸ್ಥಿರಶಾಸನವಾಗಿ ಮೆಱೆವ ಈ ಭಿಕ್ಷಾಟನದ ಚಾರಿತ್ರಕ್ಕೆ ಅಧಿಪತಿಯಾದ ಪರಮೇಶ್ವರನು ಜಗದ್ಭರಿತನಾಗಿ ಹೇಗೆ ಒಪ್ಪುವನು ? ಎಂದರೆ ಶ್ರೀ ಕೃಷ್ಣನು ಹದಿನಾಱು ಸಾವಿರ ಗೋಪಾಂಗನೆಯರುಗಳ ಮನೆಮನೆಗಳೊಳಗೆ (ಹೇಗೆ) ತಪ್ಪದಿಹನು ಆ ಮರ್ಯಾದೆಯಿಂದ (ಇದ್ದನು ಎಂದರೆ) ಗುರುಲಿಂಗ ಕವೀಶ್ವರನು ಹೇಳಿದ ಮೋಹನವಾದ ಈಕೃತಿಯು ರಸಿಕರಾದವರಿಗೆ ಆಭರಣವಾಗಿ ಭಾವಜ್ಞರ ಮನಸ್ಸಿಗೆ ಸೊಗಸ ಬೀಱುತಿಹುದು ಎಂದು ಕವೀಶ್ವರನು ಬಿನ್ನಹ ಮಾಡುತಿರ್ದಾನು.

ಚಾರುಮಾದಿತ್ಯಾಶ್ರಿತನ ಸೋಮಕೋಟೀರ |
ಭಾರನಂ ಮಂಗಳಾಕಾರನಂ ವಿಬುಧ [1]ವಿ |
ಸ್ತಾ[1]ರನುತಿಪಾತ್ರತ್ರಿಣೇತ್ರನಂ ಬೃಹಸ್ಪತಿ[2] ಶತಕೋಟಿ[2] ಸಂಕಾಶನಂ ||
ನಾರಾಯಣಾಕ್ಷಿಪೂಜಿತ[3]ಶುಕ್ರವರನ ಶನಿ[3] |
ವಾರವಂದ್ಯನನಗಣಿತಪ್ರಮಥರುಗಳ ಪರಿ |
ವಾರದೊಡೆಯನನೇೞುವಾರ ತಪ್ಪದೆ ನೆನೆದು ಬದುಕುವುದು ಸರ್ವಜನರು ||

ಟೀಕು—ಸೂರ್ಯನಿಂದ ಆಶ್ರಯಿಸಿಕೊಳ್ಳಲ್ಪಟ್ಟಾತನು, ಸೋಮನ ಧರಿಸಿದಾತನು, ಮಂಗಳವಾದ ಆಕಾರವುಳ್ಳಾತನು, ಬುಧಜನರಾದ ವಿದ್ವಾಂಸರಿಂದ ಕೊಂಡಾಡಿಸಿಕೊಳ್ಳಲು ತಕ್ಕಾತನು,............ಈಪ್ರಕಾರದಿಂದ ಆದಿತ್ಯ ಸೋಮ ಮಂಗಳ ಬುಧ ಬೃಹಸ್ಪತಿ ಶುಕ್ರ ಶನಿಗಳೆಂಬೀಳು ವಾರಂಗಳಲ್ಲಿ ಈ ಪ್ರಮಥರೊಡೆಯನಾದ ಶಂಕರ ಮೂರ್ತಿಯು ಸರ್ವಜನರು ನೆನೆದು ಸುಖದಲ್ಲಿರ್ಪುದೆಂದು ಕವೀಶ್ವರನು ಹೇಳುತಿರ್ದಾನು.

ಗುರುವೆ ಜಯಜಯ ! ವೇದಶಾಸ್ತ್ರ ಸನ್ನುತಿಪಾತ್ರ |
ಗುರುವೆ ಜಯಜಯ! ನಿಜಾನಂದ ನಿರ್ಮಲಗಾತ್ರ |
ಗುರುವೆ ಜಯಜಯ! ವಿಶ್ವತೋರೂಪ ವಿಮಲಪ್ರತಾಪ ಮಾಯಾವಿಲೋಪ||
ಗುರುವೆ ಜಯಜಯ! ಪರಮಪಾವನಗುಣೋಲ್ಲಾಸ |
ಗುರುವೆ ಜಯಜಯ! ನಿರಂಜನ ನಿತ್ಯಪರಿತೋಷ |
ಗುರುವೆ ಜಯಜಯ! ಶಿವಜ್ಞಾನಿ ಬಸವೇಶ ಮಮ ಹೃದಯಾಬ್ಜ ಸನ್ನಿವಾಸ||

ಟೀಕು—ಶ್ರೀ ಗುರವೇ, ವೇದಶಾಸ್ತ್ರಂಗಳಿಂದ ಸ್ತೋತ್ರಪಾತ್ರನಾದಾತನೇ, ನಿಜಾನಂದ ಮೂರ್ತಿಯೇ, ನಿರ್ಮಲಗಾತ್ರನೇ, ವಿಶ್ವತೋರೂಪನೇ, ವಿಮಲಪತಾಪನೇ, ಮಾಯಾಸಹಿತನೇ, ಪಾವನಾತ್ಮಗುರುವೇ, ಸದ್ಗುಣಗುರವೇ, ನಿರಂಜನಗುರುವೇ, ನಿತ್ಯತೃಪ್ತಿ ಗುರುವೇ, ಶಿವಜ್ಞಾನಗುರುವೇ, ಬಸವೇಶ್ವರಗುರುವೇ,

ಪಾ—1. ಜನಸಾ. 2. ಯಕೊಟಿರವಿ. 3. ಸುಕ್ರಮನಶನೀ.

ಜಯಜಯ! ಎನ್ನ ಹೃದಯಕಮಲದಲ್ಲಿ ನಿಂತು ನನ್ನನ್ನು ರಕ್ಷಿಸಿ, ಸರ್ವರನ್ನೂ ಪಾಲಿಸೆಂದು ಕವೀಶ್ವರನು ಸ್ತೋತ್ರವ ಮಾಡುತಿರ್ದಾನು.

ಈ ಭಿಕ್ಷಾಟಣದ ಚರಿತವೆಂಬ ಶಿವಕಾವ್ಯವನ್ನು ಸ್ತ್ರೀಯರು ಬಾಲಕರು ವೃದ್ಧರು ಎಲ್ಲರೂ ಕೇಳಿ ಪುಣ್ಯಾತ್ಮರಾಗಬೇಕೆಂದು ಕವೀಶ್ವರನು ಅಭಿವರ್ಣಿಸುತಿರ್ದಾನು.

ಇಂತು ಮೂಱನೆಯ ಸಂಧಿ ಸಂಪೂರ್ಣಂ.

ಭಿಕ್ಷಾಟನ ಚರಿತೆ ಸಮಾಪ್ತಿಯಾಯಿತು.